# "ಕನ್ನಡದ ಉಪಭಾಷೆಗಳು"

ಕನ್ನಡ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ


ಸಂಶೋಧಕರು

ಎಚ್.ಆರ್. ರೇಣುಕ

ಮಾರ್ಗದರ್ಶಕರು

ಡಾ.ಚಂದ್ರ ಕಾಳೇನಹಳ್ಳಿ





ಕರ್ನಾಟಕ ಸಂಘ (ರಿ), ಮಂಡ್ಯ

ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ- ಮಾನ್ಯತೆ ಪಡೆದಿದೆ)

2007–2008

# "ಕನ್ನಡದ ಉಪಭಾಷೆಗಳು"

ಕನ್ನಡ ಎಂ. ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ


<u>ಸಂಶೋಧಕರು</u>

ಎಚ್. ಆರ್. ರೇಣುಕ

<u>ಮಾರ್ಗದರ್ಶಕರು</u>

ಡಾ.ಚಂದ್ರು ಕಾಳೇನಹಳ್ಳಿ









ಕರ್ನಾಟಕ ಸಂಘ (ರಿ) , ಮಂಡ್ಯ

ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ – ಮಾನ್ಯತೆ ಪಡೆದಿದೆ)

2007 – 2008

# ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಶ ಗೌಡ ಸಂಶೋಧನಾ ಕೇಂದ್ರದಲ್ಲಿ 2007–08ನೇ ಸಾಲಿಗೆ ಕನ್ನಡ ಎಂ.ಫಿಲ್ ಪದವಿಗಾಗಿ **"ಕನ್ನಡದ ಉಪಭಾಷೆಗಳು"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ. ಈ ನಿಬಂಧವಾಗಲಿ ನಿಬಂಧದ ಅಧ್ಯಾಯವಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಲ್ಪಟ್ಟಿಲ್ಲ. ಈ ಸಂಶೋಧನಾ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಗೆ ಸಂಬಂಧಿಸಿದಂತೆ ಮೌಲ್ಯ ಸ್ವೀಕಾರಕ್ಕಾಗಿ ಒಪ್ಪಿಸುತ್ತಿರುವುದಕ್ಕೆ ನನ್ನ ಒಪ್ಪಿಗೆ ಇದೆ.

ದಿನಾಂಕ: **೧೦ : ೦೯ : ೨೦೦೮**

ಮಾರ್ಗದರ್ಶಕರ ಸಹಿ

(ಡಾ. ಚಂದ್ರು ಕಾಳೇನಹಳ್ಳಿ)

# ಅಭ್ಯರ್ಥಿಯ ಘೋಷಣೆ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಶ ಗೌಡ ಸಂಶೋಧನಾ ಕೇಂದ್ರದಲ್ಲಿ 2007–08ನೇ ಸಾಲಿಗೆ ಕನ್ನಡ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು ***"ಕನ್ನಡದ ಉಪಭಾಷೆಗಳು"*** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ***"ಡಾ. ಚಂದ್ರು ಕಾಳೇನಹಳ್ಳಿ"*** ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್ ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ದಿನಾಂಕ: ೧೦:೦೯:೨೦೦೮

ಅಭ್ಯರ್ಥಿಯ ಸಹಿ

# ಪರಿವಿಡಿ

# ಭಾಷೆ

**ಪೀಠಿಕೆ:**

ಭಾಷೆ ಮಾನವನ ಶೋಧದಲ್ಲಿಯೇ ಮಹತ್ವದ ಶೋಧವಾಗಿದೆ. ಪ್ರಾಣಿ ಮತ್ತು ಮಾನವ ಸಮಾಜದ ಪ್ರತ್ಯೇಕತೆಯನ್ನು ಎತ್ತಿ ಹಿಡಿಯುವಲ್ಲಿ ಭಾಷೆಯ ಪಾತ್ರ ಮುಖ್ಯವಾದುದು. ಮಾನವನಿಗೆ ತನ್ನದೇ ಸಂಶೋಧನೆಯಾದ ಭಾಷೆಯ ಹುಟ್ಟನ್ನು ಕುರಿತು ಒಂದು ಖಚಿತ ನಿರ್ಣಯಕ್ಕೆ, ಏಕಾಭಿಪ್ರಾಯಕ್ಕೆ ಬರಲು ಸಾಧ್ಯವಾಗಿಲ್ಲ. ಜಗತ್ತಿನಾದ್ಯಂತ ಸಾವಿರಾರು ಭಾಷೆಗಳಿರುವುದು ಇದಕ್ಕೆ ಕಾರಣವಾಗಿದೆ. ಭಾಷೆ ಮಾನವನ ಸಂವಹನದ ಅವಶ್ಯಕತೆಗೆ ಕಂಡುಕೊಂಡ ಒಂದು ಸಂಪರ್ಕ ಮಾಧ್ಯಮ ಎಂಬ ಅಭಿಪ್ರಾಯಕ್ಕೆ ಬರಲು ಹಲವು ಶೋಧಗಳನ್ನು ಸಿದ್ಧಾಂತಗಳನ್ನು ಮಂಡಿಸಲಾಯಿತು.

ಪ್ರತಿಯೊಂದು ಸಮಾಜವು ತನ್ನದೇ ಆದ ಭಾಷೆಯನ್ನು ಹೊಂದಿರುತ್ತದೆ. ಸಮಾಜದ ಒಳಗೆ ಒಂದೇ ಭಾಷೆಗೆ ಹಲವು ಭಾಷಿಕ ರೂಪಗಳಿರುತ್ತವೆ. ಸಮಾಜದ ಪ್ರತಿಯೊಬ್ಬ ವ್ಯಕ್ತಿಯ ಭಾಷೆ ಒಂದೇ ರೀತಿಯಾಗಿಲ್ಲ. ಪ್ರತಿ ವ್ಯಕ್ತಿಯ ಹುಟ್ಟಿನೊಂದಿಗೆ ಹೊಸದೊಂದು ಭಾಷಾ ರೂಪ ಹುಟ್ಟುತ್ತದೆ ಎನ್ನುವ ಮಟ್ಟಿಗೆ ಭಾಷಾರೂಪಗಳು ಪ್ರಪಂಚದಾದ್ಯಂತ ಹರಡಿಕೊಂಡಿದೆ. ವ್ಯಕ್ತಿಯೊಂದಿಗೆ ಹೊಸಹುಟ್ಟು ಪಡೆಯುವ ಭಾಷೆ ಆತನೊಂದಿಗೆ ಸಾಯುವುದಿಲ್ಲ. ವ್ಯಕ್ತಿ ಭಾಷೆಯನ್ನು ಬಳಸುತ್ತಾನೆ ಮತ್ತು ಬೆಳೆಸುತ್ತಾನೆ. ಅದು ಅವನ ಸೊತ್ತು ಮಾತ್ರವಾಗಿರದೆ ಆತನ ಸಮುದಾಯದ ಸೊತ್ತಾಗಿರುತ್ತದೆ. ಈ ಸಮುದಾಯದ ಭಾಷೆಗೆ ಚರಿತ್ರೆಯಿರುತ್ತದೆ, ಸಾಂಸ್ಕೃತಿಕ ಹಿನ್ನಲೆ ಇರುತ್ತದೆ. ಈ ಸಮುದಾಯ ನಿರಂತರವಾಗಿ ಈ ಭಾಷೆಯನ್ನು ಬಳಸುತ್ತಿರುತ್ತದೆ.

ಭಾಷೆ ಉಗಮ ಕುರಿತು ಮಂಡಿಸಲಾದ ಸಿದ್ಧಾಂತಗಳೆಲ್ಲ ಭಾಷೆಯ ವಿಕಾಸದ ಬಗ್ಗೆಯೇ ಹೆಚ್ಚು ಬೆಳಕು ಚೆಲ್ಲಿದವು. ಈ ಹಿನ್ನಲೆಯಲ್ಲಿ ಡಾರ್ವಿನ್ ವಿಕಾಸವಾದವನ್ನು ಭಾಷೆಗೂ ಅನ್ವಯಿಸಬಹುದಾಗಿದೆ. ಇಂದಿನ ಮಾನವ ಸಹಸ್ರಾರು ವರ್ಷಗಳ ಹಿಂದಿನಂತೆ ಹೇಗೆ ಇರಲ್ಲಿಲ್ಲವೋ ಹಾಗೆ ಮಾನವನಿಂದ ಸೃಷ್ಟಿಯಾದ ಇಂದಿನ ಭಾಷೆಯು ಸಹಸ್ರಾರು ವರ್ಷಗಳ ಹಿಂದೆ ಬೇರೆಯಾಗಿರಬೇಕು. ಕನ್ನಡದಲ್ಲಿ ಹಳೆಗನ್ನಡಕ್ಕೂ, ಹೊಸಗನ್ನಡಕ್ಕೂ ಅಪಾರ ಪ್ರಮಾಣದಲ್ಲಿ ವ್ಯತ್ಯಾಸವಿರುವುದನ್ನು ಗಮನಿಸಬಹುದು. ಮಾನವನ ದೇಹ ಲಕ್ಷಾಂತರ ವರ್ಷಗಳಲ್ಲಿ ವಿಕಾಸವಾದಂತೆ ಆತನ ಧ್ವನ್ಯಂಗಗಳು ಮಾರ್ಪಾಡಾದವು. ಈ ಮಾರ್ಪಾಡಿಗೆ ತಕ್ಕಂತೆ ಭಾಷೆಯೂ ಮಾರ್ಪಾಡಾಯಿತು. ಪ್ರಾಣಿಗಳಲ್ಲಿ ಈ ಧ್ವನ್ಯಂಗಗಳು ಮಾರ್ಪಾಡಾಗಿಲ್ಲದೇ ಇರುವುದರಿಂದ ಭಾಷೆ ವಿಕಾಸವಾಗದೇ ಹಾಗೆ ಉಳಿದಿರುವುದನ್ನು ಕಾಣುತ್ತೇವೆ. ಸನ್ನಿವೇಷ

ಪರಿಸ್ಥಿತಿಗೆ ತಕ್ಕಂತೆ ವ್ಯವಹರಿಸುವ ಕೌಶಲ್ಯ ಪ್ರಾಣಿ ಭಾಷೆಗೆ ಇಲ್ಲ. ಮಾನವನ ಭಾಷೆಗಿರುವ ಯಾದೃಚ್ಛಿಕತೆಯೇ ಸಾಮಾಜಿಕವಾಗಿ, ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ಸಾಹಿತ್ಯಕವಾಗಿ ನಾನಾ ಆಯಾಮಗಳಲ್ಲಿ ಬೆಳೆದು ವಿವಿಧ ಸ್ವರೂಪಗಳಲ್ಲಿ ಭಾಷೆ ಅಭಿವ್ಯಕ್ತಿಗೊಳ್ಳುವುದಕ್ಕೆ ಕಾರಣವಾಗಿದೆ.

ಮಾನವ ಕಾಡಿನಲ್ಲಿರಲಿ ನಾಡಿನಲ್ಲಿರಲಿ ಆತನಿಗೆ ಒಂದು ಭಾಷೆ ಇದ್ದೇ ಇರುತ್ತದೆ. ಆ ಭಾಷೆಗೆ ಲಿಪಿ ಇರಬಹುದು ಇಲ್ಲದಿರಬಹುದು. ಲಿಪಿ ಇಲ್ಲದೆಯೂ ಅಸಂಖ್ಯಾತ ಭಾಷೆಗಳು ಜೀವಂತವಾಗಿವೆ. ಈ ಕಾರಣದಿಂದ ಭಾಷೆಯನ್ನು ಶ್ರೇಷ್ಠ ಕನಿಷ್ಠ ಎಂದು ತೀರ್ಮಾನಮಾಡಲಾಗದು. ಭಾಷೆಯೊಂದು ಪ್ರಬುದ್ಧ – ಅಪ್ರಬುದ್ಧ ಎಂದಾಗಲಿ, ಶ್ರೇಷ್ಠ – ಕನಿಷ್ಠ ಎಂದಾಗಲಿ ಇಲ್ಲ. ಭಾಷೆಯೊಂದು ರೂಪುಗೊಳ್ಳುವುದರ ಹಿಂದೆ ಆ ಸಮಾಜದ ಸಾಂಸ್ಕೃತಿಕ, ಚಾರಿತ್ರಿಕ ಅಂಶಗಳು ಕಾರಣವಾಗುತ್ತವೆ. ಒಂದು ಭಾಷೆಯ ಬೆಳವಣಿಗೆಯ ಹಿಂದೆ ಒಂದು ಸಮುದಾಯದ ನಿರಂತರ ಪ್ರಯತ್ನಗಳಿರುತ್ತವೆ.

ಮಾನವನ ಪ್ರಜ್ಞೆಯ ಮತ್ತೊಂದು ರೂಪವೇ ಭಾಷೆ. ಭಾಷೆ ಮಾನವನ ದೈನಂದಿನ ಅವಶ್ಯಕತೆಗಳಲ್ಲೊಂದು. ತಾನು ಕಂಡು ಅನುಭವಿಸಿದ ಪ್ರಕೃತಿಯ ಅನುಭವಗಳನ್ನು, ತನ್ನ ಆಸೆ ಆಕಾಂಕ್ಷೆಗಳನ್ನು ವ್ಯಕ್ತಪಡಿಸಲು ಮಾನವನಿಗಿರುವ ಸಮರ್ಥ ಮಾಧ್ಯಮ ಭಾಷೆ. ವ್ಯಕ್ತಿಯ ಅವಶ್ಯಕತೆಗಳಿಗನುಗುಣವಾಗಿ ಭಾಷೆ ಹುಟ್ಟುತ್ತದೆ. ಜೀವನದ ಅವಶ್ಯಕತೆಗಾಗಿ ವ್ಯಕ್ತಿ ಭಾಷೆಯೊಂದನ್ನು ಇಲ್ಲವೆ ಹಲವು ಭಾಷೆಗಳನ್ನು ಕಲಿಯಬೇಕಾಗುತ್ತದೆ. ಹೀಗೆ ಒಂದು ಸಮಾಜದ ಮಾನವರ ನಡುವೆ ಸಂವಹನಕ್ಕೆ ನೆರವಾಗುವ ಧ್ವನಿ ಸಂಕೇತಗಳ ಸಮೂಹವೇ ಭಾಷೆಯಾಗಿದೆ. ಭಾಷೆ ಭಿನ್ನ ಭಿನ್ನ ಸಮಾಜಗಳಲ್ಲಿ ಭಿನ್ನ ಪರಿಸರದಲ್ಲಿ ವಾಸಿಸುವ ವಿಭಿನ್ನ ಜಾತಿ, ವೃತ್ತಿ ವರ್ಗಗಳಲ್ಲಿ ಸಾಮಾಜಿಕವಾಗಿ ಹಲವು ಭಾಷಿಕ ರೂಪಗಳನ್ನು ಪಡೆಯುತ್ತದೆ. ಒಂದು ಸಮಾಜದ ಭಾಷೆಯ ವ್ಯವಹಾರವು ಆ ಭಾಷೆಯನ್ನು ಆಡುವ ಜನರ ಸಮಾಜಕ್ಕೆ ಮಾತ್ರ ಸೀಮಿತವಾಗಿರುತ್ತದೆ. “ಭಾಷೆ ಒಂದು ಸಾಮಾಜಿಕ ಕ್ರಿಯೆ” ಎನ್ನುವ ಚಾಮ್‌ಸ್ಕಿ ಭಾಷೆ ಜೈವಿಕವಾದುದು ಎಂದೂ ಅಭಿಪ್ರಾಯಪಡುತ್ತಾರೆ. ಜೈವಿಕ ಕ್ರಿಯೆಗಳು ಭಾಷೆಯಲ್ಲಿ ಮುಖ್ಯವಾಗುತ್ತವೆ. ಹುಟ್ಟಿನೊಡನೆ ನಮಗೆ ಭಾಷೆ ಬಂದಿರುವುದಿಲ್ಲ. ಸತತ ಪ್ರಯತ್ನ ಮತ್ತು ಕಲಿಯುವಿಕೆಯಿಂದ ಭಾಷೆಯನ್ನು ನಮ್ಮದಾಗಿಸಿಕೊಂಡಿರುತ್ತೇವೆ. ಒಪ್ಪಿತ ಕ್ರಿಯೆ, ಸೂಚನಾ ಕ್ರಿಯೆ, ಘೋಷಣಾ ಕ್ರಿಯೆ, ಆಣೆ ಕ್ರಿಯೆ, ಭಾವಸೂಚಕ ಕ್ರಿಯೆ ಮೊದಲಾದ ಸಾಮಾಜಿಕ ಕ್ರಿಯೆಗಳ ಮೂಲಕ ಭಾಷೆ ನಮ್ಮದಾಗುತ್ತದೆ.

ಭಾಷೆಯಿಂದಾಗಿ ಸಂಸ್ಕೃತಿ ಮತ್ತು ಸಮಾಜಗಳ ನಡುವೆ ಸಂಪರ್ಕವೇರ್ಪಡುತ್ತದೆ. ಅನೇಕ ವ್ಯಕ್ತಿಗಳ ಜೀವನ ವಿಧಾನ ಸಮಾಜದ ಭಾಗವಾದರೆ ವ್ಯಕ್ತಿ ಆ ಸಮಾಜದ ಘಟಕವಾಗಿ ಸಂಸ್ಕೃತಿಯಲ್ಲಿ ಬಾಳುತ್ತಾನೆ. ಮಾನವನೇ ಈ ಸಂಸ್ಕೃತಿಯ ಸೃಷ್ಟಿಕರ್ತ. ಪ್ರಾಣಿ ಸಮಾಜದಲ್ಲಿ ಸಂಸ್ಕೃತಿ ಎಂಬುದಿಲ್ಲ. ಆತನದೇ ಮತ್ತೊಂದು ಸೃಷ್ಟಿಯಾದ ಭಾಷೆ ಈ ಸಂಸ್ಕೃತಿಯನ್ನು ಮುಂದಕ್ಕೊಯ್ಯುವ ಕೆಲಸವನ್ನು ಮಾಡುತ್ತದೆ. ಆದ್ದರಿಂದ ಭಾಷೆ ಮತ್ತು ಉಪಭಾಷೆಗಳ ಅಧ್ಯಯನವೆಂದಾಗ ಸಂಸ್ಕೃತಿಯನ್ನು ಹೊರತುಪಡಿಸಿ ನೋಡಲು ಸಾಧ್ಯವಿಲ್ಲ. ಪ್ರತಿಯೊಂದು ಭಾಷೆಯ ಹಿಂದೆ ಸಂಸ್ಕೃತಿಯ ಹಿನ್ನೆಲೆಯಿರುತ್ತದೆ. ಒಂದು ಭಾಷೆಯ ಪದ, ವಾಕ್ಯ, ನುಡಿಗಟ್ಟು, ಸಾಹಿತ್ಯ, ಧ್ವನಿ, ಧ್ವನಿಮಾ, ಆಕೃತಿಮಾ, ವ್ಯಾಕರಣ ರಚನೆಯ ಹಿಂದೆ ಆ ಸಂಸ್ಕೃತಿಯ ಪ್ರಭಾವ ಇರುತ್ತದೆ. ಸಂಸ್ಕೃತಿ ಮತ್ತು ಭಾಷೆ ಸಮಾಜದ ಸಮುದಾಯದ ಆಸ್ತಿ. ಆದ್ದರಿಂದಲೇ ಭಾಷೆ ಮತ್ತು ಸಂಸ್ಕೃತಿಯನ್ನು ಕಾಪಾಡಿಕೊಳ್ಳುವ ನಿರಂತರ ಪ್ರಯತ್ನಗಳು ಸಮಾಜದಲ್ಲಿರತ್ತದೆ. ಇದನ್ನು ಆಯಾ ಸಮಾಜದ ಚರಿತ್ರೆಯ ಮೂಲಕ ತಿಳಿಯಬಹುದಾಗಿದೆ.

ಭಾಷೆಯ ಮೂಲಕ ಮಾನವ ತನ್ನನ್ನು ತಾನು ಅಭಿವ್ಯಕ್ತಿಸಿಕೊಳ್ಳುತ್ತಾನೆ. ಅದಕ್ಕೆ ಸಂಸ್ಕೃತಿ ಸಹಾಯ ಮಾಡುತ್ತದೆ. ಸಂಸ್ಕೃತಿ ಇಲ್ಲದೆ ಭಾಷೆಗೆ ಅಸ್ತಿತ್ವವಿಲ್ಲ. ಭೌತಿಕ ಸಂಸ್ಕೃತಿಯು ಭಾಷೆಯಿಂದಾಗಿಯೇ ಮುಂದುವರಿಯುತ್ತದೆ. ಭಾಷೆಯಿಂದಾಗಿ ಒಂದು ಸಮಾಜ ಸಂಸ್ಕೃತಿ ಗುರುತಿಸಲ್ಪಡುತ್ತದೆ. ಅದು ಒಂದು ಸಮುದಾಯದ ಜನರನ್ನು ನಿಕಟವಾಗಿ ಬಂಧಿಸುತ್ತದೆ. ಭಾಷೆಯಲ್ಲಿ ಒಂದು ಜನಾಂಗದ ಇತಿಹಾಸ ಅಡಗಿರುತ್ತದೆ.

ಸಂಸ್ಕೃತಿ ಎಂದರೆ ಒಂದು ಸಮಾಜದ ಜನ ಬದುಕಿದ ರೀತಿ ಬದುಕುತ್ತಿರುವ ರೀತಿ ಬದುಕಬೇಕಾದ ರೀತಿ. ಎಲಿಯಟ್ "ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಒಂದು ಜನಾಂಗದ ಸಮಗ್ರ ಜೀವನ ವಿಧಾನವೇ ಸಂಸ್ಕೃತಿ" ಎಂದಿದ್ದಾರೆ. ಮಾನವ ಬದುಕಿನ ಸಮಸ್ತವನ್ನೂ ಒಳಗೊಳ್ಳುವ ಸಂಸ್ಕೃತಿಯನ್ನು ಜೀವಂತವಾಗುಡುವ ಚೈತನ್ಯವೇ ಭಾಷೆ.

"ಭಾಷೆ ಸಂಸ್ಕೃತಿಯ ಭಾಗ: ಹಾಗೇಯೇ ಸಂಸ್ಕೃತಿಯ ಅಭಿವ್ಯಕ್ತಿ ಸಹ, ಆದ್ದರಿಂದಲೇ ಸಂಸ್ಕೃತಿಗಿರುವ ಭೌತಾತೀತ ಮತ್ತು ವ್ಯಕ್ತಾತೀತ ಲಕ್ಷಣಗಳು ಭಾಷೆಗೆ ಇವೆ."(ರಾಗೌ,ಪು–5) ಭಾಷೆ ಮೊದಲ ಹಂತದಲ್ಲಿ ಒಂದು ಭೌತಿಕ ಕ್ರಿಯೆ. ಆದ್ದರಿಂದಲೇ ಅದು ಭೌತಾತೀತ ಲಕ್ಷಣವನ್ನು ಹೊಂದಿರುತ್ತದೆ. ಅದು ಒಬ್ಬನಿಗೆ ಮಾತ್ರ ಸೀಮಿತವಾಗಿರುವುದಿಲ್ಲ ಎಲ್ಲರಿಗೂ ಸೇರಿರುತ್ತದೆ. ಆದ್ದರಿಂದ ಅದು ವ್ಯಕ್ತಾತೀತ ಲಕ್ಷಣವನ್ನು ಹೊಂದಿರುತ್ತದೆ. ನಾವು ಆಡುವ ಭಾಷೆ ನಮ್ಮದೆನಿಸಿದರೂ ಅದು ಸಮುದಾಯದ ಸೊತ್ತಾಗಿರುತ್ತದೆ. ಅದಕ್ಕೆ ಸಹಸ್ರಾರು ವರ್ಷಗಳ ಇತಿಹಾಸವಿರುತ್ತದೆ.

ಭೌತಿಕ ಸಂಸ್ಕೃತಿಗೆ ಶಕ್ತಿಯನ್ನು ಆವಾಹನೆ ಮಾಡಿ ಜೀವ ತುಂಬುವುದು ಬೌದ್ಧಿಕ ರೂಪವಾದ ಭಾಷೆ. ಸಂಸ್ಕೃತಿಯ ಜೀವಂತಿಕೆಗೆ ಕಾರಣವಾಗುವ ಎಲ್ಲಾ ಅಂಶಗಳನ್ನು ಭಾಷೆ ಹಿಡಿದಿಟ್ಟುಕೊಳ್ಳುವ ಜೊತೆಗೆ ಅದನ್ನು ನಿರಂತರ ಚಾಲನೆಗೆ ಒಳಪಡಿಸುತ್ತದೆ. ಭಾಷೆ ಸಂಸ್ಕೃತಿಯನ್ನು ಸಂಘಟಿಸುತ್ತದೆ. ಸಂಸ್ಕೃತಿಯ ಭಿನ್ನ ಆಯಾಮಗಳು ಭಾಷೆಯಿಂದ ಮುಂದುವರಿಕೆಗೆ ಕಾರಣವಾಗುತ್ತದೆ.

ಒಂದು ಭಾಷೆ ಭಾಷಿಕವಾಗಿ ಶ್ರೀಮಂತವಾಗಿದೆಯೆಂದರೆ ಅದು ಸಾಂಸ್ಕೃತಿಕವಾಗಿಯೂ ಶ್ರೀಮಂತವಾಗಿರುತ್ತದೆ. ಸಮಾಜದ ಪ್ರತಿಯೊಂದು ವ್ಯವಹಾರವು ಮಾತೆಂಬ ಮಾಂತ್ರಿಕ ಸ್ಪರ್ಶವನ್ನು ಪಡೆದಿರುತ್ತದೆ. "ಭಾಷೆ ಮೈಪಡೆದುದು ನಡೆವಳಿ ಮತ್ತು ನುಡಿವಳಿಗಳ ಹಿನ್ನೆಲೆಯಲ್ಲಿಯೇ. ಭಾಷೆಯ ಮೂಲಕ ಆ ಭಾಷಿಕರ ಸಂಸ್ಕೃತಿಯ ಇತಿಹಾಸ ಮತ್ತು ಆ ಸಂಸ್ಕೃತಿಯ ಸ್ವರೂಪ ಬೆಳಕಿನಲ್ಲಿ ಬರುವುದು ಇದೇ ಕಾರಣದಿಂದ"(ಶಂ.ಬಾ. ಜೋಷಿ, ಪು–583) ಭಾಷೆ ತನ್ನದೇ ಭಾಷಿಕ ಚೌಕಟ್ಟನ್ನು ಪಡೆದುಕೊಳ್ಳುವಲ್ಲಿ ಧ್ವನಿ, ಅರ್ಥ, ವಾಕ್ಯರಚನಾ ವಿಧಾನಗಳನ್ನು ಅಳವಡಿಸುಕೊಳ್ಳುವಲ್ಲಿ ಸಂಸ್ಕೃತಿಯ ಪಾತ್ರ ಮುಖ್ಯವಾಗುತ್ತದೆ. ಕನ್ನಡ ಭಾಷೆಯ ಉಪಭಾಷೆಗಳಲ್ಲಿ ಪದಗಳು ಅರ್ಥ ವತ್ಯಾಸದಿಂದ ಕೂಡಿರುವುದು ಇದಕ್ಕೆ ನಿದರ್ಶನವಾಗಿದೆ. ಮೈಸೂರು ಕನ್ನಡದಲ್ಲಿ ತಾರೆ, ನಕ್ಷತ್ರ ಎನ್ನುವುದಕ್ಕೆ ಗೊಂಡರ ಕನ್ನಡದಲ್ಲಿ ತಾರಕ್ಲು ಎಂಬ ಪದ ಬಳಕೆಯಲ್ಲಿದೆ. ಉತ್ತರ ಕನ್ನಡದಲ್ಲಿ ಅಮ್ಮ ಎಂಬುದು ವಿಧವೆ ಎಂಬ ಅರ್ಥ ನೀಡಿದರೆ ಮೈಸೂರು ಕನ್ನಡದಲ್ಲಿ ತಾಯಿ ಎಂಬ ಅರ್ಥದಲ್ಲಿ ಬಳಕೆಯಾಗುತ್ತಿದೆ. ಶಿಷ್ಟಕನ್ನಡದಲ್ಲಿ ಬಳಕೆಯಾಗುವ ಸಂಕ್ರಾಂತಿ, ಶಂಕರ, ಶಾಸ್ತ್ರ, ಕರಡಿ ಮೊದಲಾದ ಪದಗಳು ಸಾಮಾಜಿಕ ಉಪಭಾಷೆಗಳಲ್ಲಿ ಸಂಕುರಾತಿ, ಸಂಕರ, ಸಾಸುರ, ಕರ್ಡಿ ಎಂದು ಬಳಕೆಯಾಗುತ್ತದೆ. ಹೀಗೆ ಪದಗಳು ವಿರಳವಾಗುವುದಕ್ಕೆ, ಒತ್ತಕ್ಷರ ಪಡೆಯುವುದಕ್ಕೆ, ಅರ್ಥ ವ್ಯತ್ಯಾಸವಾಗುವದಕ್ಕೆ ಆ ಪರಿಸರದ, ಸಮುದಾಯದ ಸಂಸ್ಕೃತಿಯ ಹಿನ್ನಲೆ ಇರುತ್ತದೆ.

ಭಾಷೆ ಎಂಬ ಅಸ್ತಿಪಂಜರಕ್ಕೆ ಸಂಸ್ಕೃತಿ ಜೀವ ತುಂಬುತ್ತದೆ. ಭಾಷೆಯನ್ನು ಮಾನವ ಸಂವಹನಕ್ಕಾಗಿ ಮಾತ್ರ ಬಳಸುತ್ತಿಲ್ಲ. ಮನರಂಜನೆಗೆ, ಆನಾರೋಗ್ಯ ನಿವಾರಣೆಗೆ, ಅಶುಭ ನಿವಾರಣೆಗೆ ಹೀಗೆ ಬೇರೆ ಬೇರೆ ಆಯಾಮಗಳಲ್ಲಿ ಭಾಷೆ ಬಳಕೆಯಾಗುತ್ತಿದೆ. ದೈನಂದಿನ ಜೀವನದಲ್ಲಿ ಭಾಷೆ ಸಂಪರ್ಕ ಮಾಧ್ಯಮವಾಗಿರುವುದರಿಂದ ಸಂಸ್ಕೃತಿಯ ಕೊಳು ಕೊಡುಗೆಗಳು ಸಾಮಾನ್ಯವಾಗಿ ನಡೆಯುತ್ತವೆ. ಒಂದು ಸಮಾಜದ ವ್ಯಕ್ತಿ ಒಂದೇ ಭಾಷೆಯನ್ನು ಕಲಿಯಬೇಕೆಂದೇನು ಇಲ್ಲ. ಆತನ ಅವಶ್ಯಕತೆಗಳಿಗೆ ಅನುಗುಣವಾಗಿ ಎಷ್ಟು ಭಾಷೆಯನ್ನು ಬೇಕಾದರು ಕಲಿಯುವ ಅವಕಾಶಗಳಿವೆ. ಇದರಿಂದ ಒಂದು ಭಾಷೆಯ ಶಬ್ಧ ಸಂಪತ್ತು

ವೃದ್ಧಿಯಾಗುತ್ತದೆ. ಹಣ್ಣು ತಿಂದು ಬೀಜವನ್ನು ಬಿಸಾಡುವಂತೆ ಭಾಷೆಯನ್ನು ಬಳಸಿ ಬಿಸಾಡುವುದಕ್ಕೆ ಸಾಧ್ಯವಿಲ್ಲ. ಭಾಷೆ ಮಾನವನ ಜೀವನದ ಅವಿಭಾಜ್ಯ ಅಂಗ ಮನುಷ್ಯನ ಮನಸ್ಸಿನಲ್ಲಿ ಅಮೂರ್ತವಾಗಿ ಅಡಗಿರುವ ಕಲೆಗೆ ಭಾಷೆ ಮಾಧ್ಯಮವಾಗುತ್ತದೆ. ಹಾಡು, ಗೀತೆ, ಕಥೆ, ಒಗಟು, ಗಾದೆ, ಲಾವಣಿ, ನಾಟಕ, ನೃತ್ಯಗಳು ಕಲೆಯ ಭಾಷಿಕ ಪ್ರತಿಬಿಂಬಗಳಾಗಿವೆ. ಭಾಷೆಯೊಂದಕ್ಕೆ ಲಿಪಿ ಇರಬಹುದು ಇಲ್ಲದಿರಬಹುದು ಅದಕ್ಕೆ ಸಾಹಿತ್ಯವೆಂಬುದು ಇದ್ದೆ ಇರುತ್ತದೆ. ಕಂಠಸ್ಥವಾಗಿ ಸಾಗಿ ಬಂದ ಜನಪದ ಸಾಹಿತ್ಯ ಇದಕ್ಕೆ ಸಾಕ್ಷಿಯಾಗಿದೆ. ಲಿಖಿತ ಮತ್ತು ಮೌಖಿಕ ಸಾಹಿತ್ಯಗಳು ಆಯಾ ಸಮಾಜದ ಸಂಸ್ಕೃತಿಯ ಸಂಘರ್ಷಗಳ ಉತ್ಕರ್ಷಗಳ ನೆಲೆಯನ್ನು ಸಮರ್ಥವಾಗಿ ಹಿಡಿದಿಡುತ್ತದೆ. ಮಲೆಮಹಾದೇಶ್ವರನ ಕಾವ್ಯ, ಮಂಟೇಸ್ವಾಮಿ ಕಾವ್ಯ ಮೊದಲಾದವು ಸಾಂಸ್ಕೃತಿಕ ವೀರರ ಜೀವನ ಚಿತ್ರಣದ ಜೊತೆಗೆ ಆ ಸಮುದಾಯದ ಜನ ಜೀವನವನ್ನು ದಾಖಲಿಸುತ್ತವೆ. ಭಾಷೆಗೆ ಅತೀಂದ್ರಿಯ ಶಕ್ತಿ ಇದೆ. ಆದ್ದರಿಂದಲೇ ಮಂತ್ರ–ತಂತ್ರ ಮಾಟದಂತಹ ಆರಾಧನೆಯಲ್ಲಿ ಭಾಷೆ ಶಕ್ತಿಯ ಸಂಕೇತವಾಗಿ ಬಳಕೆಯಾಗುತ್ತದೆ.

ಭಾಷೆಯನ್ನು ಕುರಿತ ನಮ್ಮ ಇಂದಿನ ಪರಿಗ್ರಹಿಕೆಗಳು ಒಂದು ಪರಿಮಿತಿಗೆ ಒಳಪಟ್ಟಿವೆ. ಇಂದು ಸಂಸ್ಕೃತಿ ಎಂದು ಕರೆಯುವ ಮೌಲ್ಯವಾಗಲಿ, ಭಾಷೆಯಾಗಲಿ ಒಂದು ನಿರ್ದಿಷ್ಟ ಸಮುದಾಯಕ್ಕೆ ಸೀಮಿತವಾಗಿರುತ್ತದೆ. ಆದರೆ ಭಾಷೆ ಕುರಿತ ಸಿದ್ಧ ಗ್ರಹಿಕೆಗಳು ಭಾಷೆಯಲ್ಲಿಯೇ ಶಿಷ್ಟಭಾಷೆ–ಉಪಭಾಷೆ ಶ್ರೇಷ್ಟ–ಕನಿಷ್ಟ ಎಂಬ ವರ್ಗೀಕರಣಕ್ಕೆ ಕಾರಣವಾಗಿದೆ. ಈ ಹಿಂದೆ ಸಂಸ್ಕೃತ ಶ್ರೇಷ್ಟಭಾಷೆ ಉಳಿದ ದೇಶಿಭಾಷೆಗಳು ಕನಿಷ್ಟ ಎಂಬ ಭಾವನೆಯಿತ್ತು. ಇಂದು ಇಂಗ್ಲಿಷ್ ಶ್ರೇಷ್ಟಭಾಷೆ ಎಂಬ ಗ್ರಹಿಕೆಯು ಪ್ರಾದೇಶಿಕ ಭಾಷೆಗಳ ಕೀಳರಿಮೆಗೆ ಕಾರಣವಾಗಿದೆ. ಕನ್ನಡದ ಒಳಗೆಯೇ ಶಿಷ್ಟಕನ್ನಡ ಬಳಸುವವರು ಶ್ರೇಷ್ಟರು ಎಂದು ಅದನ್ನು ಬಳಸದವರು ಕನಿಷ್ಟರು ಎಂಬ ಭಾವನೆ ಇದೆ. ಶಿಷ್ಟಭಾಷೆಯು ಸಮಾಜದ ಮುಖ್ಯವಾಹಿನಿಯೆಲ್ಲವನ್ನೂ ಆವರಿಸಿರುತ್ತದೆ ಮತ್ತು ಸಂಸ್ಕೃತಿಯ ಮಾನದಂಡವಾಗಿ ಕೆಲಸ ಮಾಡುತ್ತಿರುತ್ತದೆ. "ಅನೇಕ ಭಾಷೆ ಮತ ಸಂಸ್ಕೃತಿ ಜನಾಂಗಗಳು ಒಟ್ಟಿಗೆ ಇರುವ ದೇಶದಲ್ಲಿ ಆಳುವ ವರ್ಗವಾಗಲು ಪೈಪೋಟಿ ಇರುತ್ತದೆ"(ರಹಮತ್ ತರೀಕೆರೆ. ಪು–3)ಈ ಆಳುವ ವರ್ಗದ ಭಾಷೆಯು ವ್ಯವಹಾರದ ಭಾಷೆಯಾಗಿ ಇತರ ವರ್ಗಗಳ ಮೇಲೆ ಹೇರಲ್ಪಡುತ್ತದೆ. ತನ್ನದಲ್ಲದ ಭಾಷೆಯನ್ನು ಈ ವರ್ಗ ಕನಿಷ್ಟವೆಂದು ಭಾವಿಸುತ್ತದೆ. ಯಾವ ಭಾಷೆಯೂ ಶ್ರೇಷ್ಟ–ಕನಿಷ್ಟ ಎಂದಾಗಲಿ ಇಲ್ಲ. ಶ್ರೇಷ್ಟತೆ ಎಂಬುದು ಆಡುವವರ ಮನ್ನಣೆ ಅಧಿಕಾರದಿಂದ ದೊರೆತಿರುತ್ತದೆಯಷ್ಟೆ.

ಶಿಷ್ಟಭಾಷೆಯೆ ಆ ಸಮಾಜದ ಭಾಷೆಯಾಗಿರುವುದಿಲ್ಲ. ಆ ಸಮಾಜದ ಒಳಗೇ ಇರುವ ಪ್ರಾದೇಶಿಕ, ಸಾಮಾಜಿಕ ಉಪಭಾಷೆಗಳು ಈ ಏಕಮುಖ ನಿರ್ಣಯವನ್ನು

ವಿರೋಧಿಸುತ್ತವೆ. ಈ ಉಪಭಾಷೆಗಳು ವೈವಿಧ್ಯತೆಯನ್ನು, ಸಂಸ್ಕೃತಿಯಲ್ಲಿ ವಿಶಿಷ್ಟತೆಯನ್ನು ಹೊಂದಿರುತ್ತದೆ. ಏಕಮುಖ ನಿರ್ಣಯಗಳು ಈ ವೈವಿಧ್ಯತೆಯನ್ನು ನಾಶಮಾಡುತ್ತವೆ. ಕರ್ನಾಟಕದಲ್ಲಿ ಹಲವು ಸಂಸ್ಕೃತಿಗಳಿವೆ. ಹಲವು ಪ್ರಾದೇಶಿಕ ಸಾಮಾಜಿಕ ಭಾಷಾರೂಪಗಳು ಕರ್ನಾಟಕದಲ್ಲಿವೆ. ಧಾರವಾಡ ಕನ್ನಡ, ಮೈಸೂರು ಕನ್ನಡ, ರಾಯಚೂರು ಕನ್ನಡ, ಗುಲ್ಬರ್ಗಾ ಕನ್ನಡ, ಕರಾವಳಿ ಕನ್ನಡ ಮೊದಲಾದವು ಕನ್ನಡ ಪ್ರಾದೇಶಿಕ ಉಪಭಾಷೆಗಳಾಗಿವೆ. ಕುರುಬು ಕನ್ನಡ, ಸೋಲಿಗರ ಕನ್ನಡ, ಕೊರಗರ ಕನ್ನಡ, ಕರೆ ಒಕ್ಕಲರ ಕನ್ನಡ, ಮಲೆ ಕುಡಿಯರ ಕನ್ನಡ, ಹಗಲು ವೇಷದವರ ಕನ್ನಡ ಮೊದಲಾದವು ಕನ್ನಡದ ಸಾಮಾಜಿಕ ಉಪಭಾಷೆಗಳಾಗಿವೆ.

ಮಾನವ ತನ್ನ ಅಗತ್ಯಕ್ಕೆ ಭಾಷೆಯನ್ನು ದುಡಿಸಿಕೊಳ್ಳುತ್ತಾನೆ. ಭಾಷೆಯಲ್ಲಿರುವ ಯಾದೃಚ್ಛಿಕತೆಯಿಂದಾಗಿ ಒಂದೇ ಭಾಷೆಯಲ್ಲಿ ಹಲವು ಭಾಷಿಕ ಪ್ರಭೇದಗಳು ಕಂಡುಬರುತ್ತದೆ. ಈ ಭಾಷಿಕ ಪ್ರಭೇದಗಳನ್ನೇ ಉಪಭಾಷೆಗಳೆಂದು ಕರೆಯಲಾಗುತ್ತದೆ. "ಒಂದೇ ಸಮುದಾಯಕ್ಕೆ ಸೇರಿದ ಜನರು ಆಡುವ ನಾನಾ ವೈವಿಧ್ಯಗಳಿಂದ ಕೂಡಿರುವ ಭಾಷಾ ಪ್ರಭೇದಗಳನ್ನೇ ಉಪಭಾಷೆ" ಎನ್ನಲಾಗುತ್ತದೆ. ಉಪಭಾಷೆ ಮತ್ತು ಉಪಸಂಸ್ಕೃತಿಯಲ್ಲಿ ಬಳಕೆಯಲ್ಲಿಯಲ್ಲಿರುವ 'ಉಪ' ಎಂಬುದು ಪ್ರಮುಖವಾದ ಸಂಸ್ಕೃತಿ, ಭಾಷೆ ಬೇರೆಯೊಂದಿದೆ ಎಂದೂ ಮುಖ್ಯ ಸಂಸ್ಕೃತಿ, ಭಾಷೆಯೊಂದರ ಅಂಗಗಳು ಎಂದು ಅರ್ಥವಲ್ಲ. ಒಂದು ಸಮಾಜದಲ್ಲಿರುವ ಹಲವು ಸಂಸ್ಕೃತಿಗಳು, ಭಾಷಿಕ ರೂಪಗಳನ್ನು ಉಪಸಂಸ್ಕೃತಿ, ಉಪಭಾಷೆ ಎಂದು ಕರೆಯಲಾಗುತ್ತದೆ. ಭಾಷೆ, ಸಂಸ್ಕೃತಿಯಲ್ಲಿ ಯಾವುದೂ ಮೇಲು ಕೀಳು ಎಂಬುದಾಗಿ ಇಲ್ಲ. ಪ್ರಮಾಣ ಭಾಷೆಯೆಂಬುದೂ ಹಲವು ಉಪಭಾಷೆಗಳ ಸಂಗ್ರಹವಾಗಿರುತ್ತದೆ ಅದೂ ಒಂದು ಉಪಭಾಷೆಯಾಗಿರುತ್ತದೆ.

ಉಪಭಾಷೆಗಳಲ್ಲಿ ವ್ಯಾಕರಣ, ಧ್ವನಿ, ಅರ್ಥ, ಪದಗಳು ರೂಪುಗೊಂಡಿರುವುದರ ಹಿಂದೆ ಆಯಾ ಸಮಾಜದ ಸಂಸ್ಕೃತಿ ಅಡಗಿರುತ್ತದೆ. ಸಾಹಿತ್ಯ, ಸಂಗೀತ, ನಾಟ್ಯ, ದೈನಂದಿನ ಮಾತುಕತೆ ಇವೆಲ್ಲವೂ ಆ ಸಮುದಾಯದ ಅಂತರಂಗದ ಅಭಿವ್ಯಕ್ತಿಗಳಾಗಿರುತ್ತದೆ. ಜನಪದ ಸಂಸ್ಕೃತಿಯ ಕೆಲ ಆಚರಣೆಗಳು ಇದಕ್ಕೆ ನಿದರ್ಶನಗಳಾಗಿವೆ. ಅಲ್ಲಿ ನಡೆದಿರಬಹುದಾದ ಸಂಘರ್ಷಗಳತ್ತ ನಮ್ಮನ್ನು ಸೆಳೆಯುತ್ತದೆ. 'ಮಾರಿಹಬ್ಬ' ದ ಆಚರಣೆಯಲ್ಲಿ ಮಾರಿ ಎಂಬ ಪದ ಆ ಸಂಸ್ಕೃತಿಯ ಹಿನ್ನೆಲೆಯನ್ನು ಪರಿಚಯಿಸುತ್ತದೆ. ಮಾರಿ ಬ್ರಾಹ್ಮಣ ಕನ್ಯೆ. ದಲಿತನನ್ನು ಮದುವೆಯಾದ ಈಕೆ ಅದು ತಿಳಿದ ನಂತರ ಆತನನ್ನು ಕೊಂದು ಸೇಡು ತೀರಿಸಿಕೊಳ್ಳುತ್ತಾಳೆ ಎಂಬುದಾಗಿ ಮಾರಿಕಾಂಬ ಪುರಾಣದಲ್ಲಿದೆ. ಮಾರಿ ದಲಿತನನ್ನು ಕೊಂದ ಸಂಕೇತವಾಗಿ ಮಾರಿದೇವತೆಗೆ ಕೋಣವನ್ನು ಬಲಿ ಕೊಡಲಾಗುತ್ತದೆ. ಜಾತಿ ಸಂಕರದಿಂದ ಉಂಟಾದ

ಸಂಘರ್ಷವನ್ನು ಈ 'ಮಾರಿಹಬ್ಬ' ದಾಖಲಿಸುತ್ತದೆ. ಮಾರಮ್ಮ ಎಂಬ ಪದ ಮರದಮ್ಮ ಎಂಬುದರಿಂದ ನಿಷ್ಪತ್ತಿಯಾಗಿದೆ. ಇದು ಮಾರಮ್ಮನನ್ನು ಮರದಮ್ಮ ಎಂಬ ಸಮೃದ್ಧಿ ದೇವತೆಯಾಗಿ ಪರಿಗಣಿಸುತ್ತದೆ. ಆಗ ಮೇಲೆ ಹೇಳಿದ ಪುರಾಣ ಹಿಂದೆ ಸರಿಯುತ್ತದೆ. ಮಾರಮ್ಮ ಸಸ್ಯ ಸಂರಕ್ಷಿಸುವ ದೇವತೆ, ಬೆಳೆಗೆ ಹಾನಿ ಮಾಡುವ ಕೋಣನನ್ನು ಕೊಂದು ಹೊಲಕ್ಕೆ ಚರುಗ ಚೆಲ್ಲುವ ಆಚರಣೆ ಇದ್ದಿರಬಹುದು. (ಹಿ.ಚಿ.ಬೊರಲಿಂಗಯ್ಯ, ಪು–10) ಹೀಗೆ ಮಾರಿ ಎನ್ನುವ ಪದ ಒಂದು ಸಾಸ್ಕೃತಿಕ ಆಚರಣೆಯ ಹಿನ್ನೆಲೆಯ ಇತಿಹಾಸವನ್ನು ತೆರದಿಡುತ್ತದೆ. ಆದ್ದರಿಂದಲೇ ಭಾಷೆ ಸಂಸ್ಕೃತಿಯ ಪ್ರತಿಬಿಂಬ.

ಭಾಷೆಯಿಂದ ಸಮಾಜದ ಕಾರ್ಯಗಳು ನಿರಾಂತಕವಾಗಿ ನಡೆಯುತ್ತದೆ. ಸಮಾಜ ತನ್ನ ವ್ಯವಸ್ಥಿತ ಬದುಕನ್ನು ಕಾಯ್ದುಕೊಳ್ಳಲು ಅಗತ್ಯ ಕೆಲಸವನ್ನು ಭಾಷೆಯ ಮೂಲಕ ಸಾಧಿಸುತ್ತದೆ. ಉದಾಃ 'ನಾವಿಬ್ಬರು ನಮಗಿಬ್ಬರು', 'ಆರತಿಗೊಬ್ಬ ಮಗ ಕೀರ್ತಿಗೊಬ್ಬ ಮಗಳು' ಎಂಬ ಘೋಷಣೆಗಳು ದಾರಿ ಬದಿಗಳಲ್ಲಿ ಬರೆದಿರುವುದನ್ನು ಕಾಣುತ್ತೇವೆ. ಇದರ ಹಿಂದಿನ ಉದ್ದೇಶ ಜನಸಂಖ್ಯೆಯನ್ನು ನಿಯಂತ್ರಿಸುವುದೇ ಆಗಿದೆ. ಈ ಉದ್ದೇಶವನ್ನು ಈ ಘೋಷಣೆಗಳು ಜನರಿಗೆ ಭಾಷೆಯ ಮೂಲಕ ಸಂವಹನ ಮಾಡುತ್ತದೆ.

ಭಾಷೆಯ ಮೂಲಕ ವ್ಯಕ್ತಿ ತನ್ನನ್ನು ತಾನು ಗುರುತಿಸಿಕೊಳ್ಳುತ್ತಾನೆ. 'ಮದವಿ ಒಂದು ತಿಂಗಳ ಬಾದ ಠರಾಸದ', 'ಅಂವ ಸಾಳೀಗದಿನ್ನ ಹೊಯ್ತನ, 'ಮನೀಲಿ ಗರೀಬಿ' ಎಂಬ ಉರ್ದು ಮರಾಠಿ ಮಿಶ್ರಿತ ವಾಕ್ಯವನ್ನು ಮಾತನಾಡುವ ವ್ಯಕ್ತಿಯನ್ನು ಗುಲ್ಬರ್ಗದವನೆಂದು ಗುರ್ತಿಸುತ್ತೇವೆ. ಆನಿ, ಮನಿ, ಕುದ್ರಿ ಮೊದಲಾದ ಇ ಕಾರಾಂತ ಪದ ಬಳಸುವ ವ್ಯಕ್ತಿ ಧಾರಾವಾಡದವನೆಂದು ಗುರುತಿಸುತ್ತೇವೆ. ಹೀಗೆ ಒಂದೊಂದು ಪ್ರದೇಶಗಳ ಜನರ ಭಾಷೆಯು ಬೇರೆ ಬೇರೆ ಭಾಷಿಕ ರೂಪಗಳನ್ನು ಹೊಂದಿದ್ದು ಅದು ವ್ಯಕ್ತಿಯ ಪ್ರಾದೇಶಿಕ ಹಿನ್ನೆಲೆಯನ್ನು ವೈಶಿಷ್ಟ್ಯವನ್ನು ಹೇಳುತ್ತದೆ. ಇಲ್ಲಿ ಭಾಷೆ ವ್ಯಕ್ತಿ ವಿಶೇಷವಾಗಿರುವುದರ ಜೊತೆಗೆ ಆ ವ್ಯಕ್ತಿಯ ಪ್ರಾದೇಶಿಕ ಹಿನ್ನೆಲೆಯನ್ನು ಗುರುತಿಸಿ ಹೇಳುತ್ತದೆ.

ಭಾಷೆ ಮತ್ತು ಸಂಸ್ಕೃತಿಗಳು ಯಾವುದೇ ಒಂದು ಪೀಳಿಗೆಯ ನಿರ್ಮಾಣವಲ್ಲ. ಭಾಷೆ ಮತ್ತು ಸಂಸ್ಕೃತಿಗೆ ಚರಿತ್ರೆ ಇರುತ್ತದೆ. ಅದು ಕಾಲದಿಂದ ಕಾಲಕ್ಕೆ ವಿಕಾಸವಾಗುತ್ತಾ ಬಂದಿರುತ್ತದೆ. ಒಂದು ಕಾಲದಲ್ಲಿ ಇದ್ದ ಪದ್ಧತಿಗಳು ಮತ್ತೊಂದು ಕಾಲಕ್ಕೆ ನಶಿಸಬಹುದು ನಿದರ್ಶನಕ್ಕೆ ಬಾಲ್ಯ ವಿವಾಹ, ಸತೀ ಪದ್ಧತಿ, ಇಂದು ನಶಿಸಿವೆ ಕಾರಣ ಆ ಪದಗಳು ಬಳಕೆಯಲ್ಲಿ ಇಲ್ಲ. ಆದ್ದರಿಂದ ಭಾಷೆಯ ಅಸ್ತಿತ್ವವನ್ನು ಸಂಸ್ಕೃತಿ ನಿರ್ಧರಿಸುತ್ತದೆ. ಸಂಸ್ಕೃತಿಯ ನಂಬಿಕೆಗಳನ್ನು ಪೀಳಿಗೆಯಂದ ಪೀಳಿಗೆಗೆ ಭಾಷೆ ವರ್ಗಾಯಿಸುತ್ತದೆ. ಉದಾಃ ಕೆಂಬೂತ ಮನೆ ಪ್ರವೇಶಿಸಿದರೆ ಸಂಪತ್ತು

ಬರುತ್ತದೆ ಎಂಬ ನಂಬಿಕೆ ಇದೆ. ಕ ಕಾರ ಚ ಕಾರವಾಗಿ ತಾಲವ್ಯೀಕರಣವಾಗುವುದು ಕನ್ನಡ ಉಪಬಾಷೆಗಳಲ್ಲಿ ಸಹಜ. ಕಿವಿ>ಚಿವಿ, ಕಿಟಕಿ>ಚಿಟಕಿ ಹಾಗೆಯೇ ಕೆಂಬೂತ>ಚೆಂಬೂತ>ಚೆಂಪೂತ>ಸಂಪೂತ>ಸಂಪತ್ತು ಎಂದಾಗುತ್ತದೆ. ಹೀಗೆ ಕೆಂಬೂತ ಎಂಬ ಪದ ಸಂಪತ್ತಿನ ಸಂಕೇತವಾಗುತ್ತದೆ.

ಭಾಷೆಯಲ್ಲಿ ಒಂದು ಸಮಾಜದ ಜೀವನ ರೀತಿ ನೀತಿಗಳು ದಾಖಲಾಗಿರುತ್ತದೆ. ಮೊಗವೀರರ ಸಮಾಜದ ಭಾಷೆ ತುಳು. ಮೀನು ಹಿಡಿಯುವುದು ಈ ಸಮಾಜದ ಮುಖ್ಯ ಕಸುಬು. ಇವರು ಮೀನಿಗೆ 'ಭೂಮಿತಾಯಿ' ಎನ್ನುತ್ತಾರೆ. ಮೊಸಗಾರರನ್ನು ಕುರಿತು 'ಅವ ದೊಡ್ಡ ತಳಮುಯಿಡ' ಎನ್ನುತ್ತಾರೆ. ತಪ್ಪು ಮಾಡಿದವರಿಗೆ 'ಅವಂಗೆ ತೊರಕೆ ಬಾಲದಲ್ಲಿ ಹೊಡೆಯಬೇಕು' ಎನ್ನುತ್ತಾರೆ. ಶೋಷಣೆ ಮಾಡುವವರಿಗೆ 'ಅವ ದೊಡ್ಡ ತಿಮಿಂಗಲ' ಎನ್ನುತ್ತಾರೆ. ಜಾತಿಯ ಹಿನ್ನೆಲೆಯಲ್ಲಿ ಈ ಸಮಾಜದ ಜನರ ಮಾತಿನಲ್ಲಿ ಅವರ ಸಂಸ್ಕೃತಿ ವ್ಯಕ್ತಗೊಳ್ಳುತ್ತಿರುವುದನ್ನು ಕಾಣುತ್ತೇವೆ. ಗೊಂಡ ಜನಾಂಗದಲ್ಲಿ 'ಕುಪ್ಪ' 'ಕುಪ್ಪಿ' ಎಂಬ ಹೆಸರಿನವರ ಸಂಖ್ಯೆಯೇ ಅಧಿಕವಾಗಿದೆ. ಇದಕ್ಕೆ ಕಾರಣ ಶಿಶುಮರಣ ಸಂಭವಿಸದಂತೆ 'ಕುಪ್ಪಿ' ಎಂಬ ಆಚರಣೆಯನ್ನು ಮಾಡುತ್ತಾರೆ. ಈ ಆಚರಣೆಯಲ್ಲಿ ಪಾಲ್ಗೊಂಡ ಗಂಡುಮಗುವಿಗೆ ಕುಪ್ಪ ಎಂತಲೂ ಹೆಣ್ಣುಮಗುವಿಗೆ ಕುಪ್ಪಿ ಎಂತಲೂ ಹೆಸರಿಡುತ್ತಾರೆ. ಹೀಗೆ ಒಂದು ಸಮಾಜದ ಜನ ಜೀವನ ಕ್ರಮಗಳು ಭಾಷೆಯಲ್ಲಿ ಹರಳುಗಟ್ಟಿರುತ್ತದೆ. ಈ ಹಿನ್ನೆಯಲ್ಲಿ ಉಪಭಾಷಾ ಅಧ್ಯಯನವೆಂದರೆ ಧ್ವನಿ, ಧ್ವನಿಮಾ, ಆಕೃತಿಮಾ, ವ್ಯಾಕರಣಗಳ ಅಧ್ಯಯನ ಮಾತ್ರವಾಗಿರದೆ ಸಮಾಜದ ಸಂಸ್ಕೃತಿಯ ಅಧ್ಯಯನವೂ ಆಗಿರುತ್ತದೆ. ಈ ಕಾರಣದಿಂದ 'ಕನ್ನಡದ ಉಪಭಾಷೆಗಳ' ಅಧ್ಯನಯನ ತುಂಬಾ ವಿಸ್ತಾರವಾದುದಾಗಿದೆ. ಮಿತಕಾಲಾವಧಿ ಪ್ರಸ್ತುತ ಅಧ್ಯಯನಕ್ಕೆ ಸೀಮಿತತೆಯನ್ನುಂಟುಮಾಡಿದೆ. ಇಲ್ಲಿ ಕನ್ನಡದ ಉಪಭಾಷೆಗಳನ್ನು ಪ್ರಾದೇಶಿಕ ಉಪಭಾಷೆಗಳು, ಸಾಮಾಜಿಕ ಉಪಭಾಷೆಗಳು, ಐತಿಹಾಸಿಕ ಉಪಭಾಷೆಗಳೆಂದು ಸ್ಥೂಲ ವರ್ಗೀಕರಣ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ಕರ್ನಾಟಕದಲ್ಲಿ ಇಪ್ಪತ್ತೇಳು ಜಿಲ್ಲೆಗಳಿವೆ. ಈ ಎಲ್ಲಾ ಪ್ರದೇಶಗಳದೂ ಒಂದೊಂದು ಪ್ರಾದೇಶಿಕ ಉಪಭಾಷೆಯೇ ಆಗಿರುತ್ತದೆ. ಅಧ್ಯಯನಕ್ಕಿರುವ ಮಿತಿ ಮತ್ತು ಪ್ರಾದೇಶಿಕ ಭಾಷೆಯಲ್ಲಿ ಕಂಡುಬರುವ ಸಾಮ್ಯತೆಯ ಆಧಾರದ ಮೇಲೆ ಪ್ರಾದೇಶಿಕ ಉಪಭಾಷೆಗಳನ್ನು ಸ್ಥೂಲವಾಗಿ ಮೈಸೂರು ಕನ್ನಡ, ಧಾರವಾಡ ಕನ್ನಡ, ಗುಲ್ಬರ್ಗಾ ಕನ್ನಡ, ಕರಾವಳಿ ಕನ್ನಡ ಎಂದು ವರ್ಗೀಕರಿಸಿಕೊಂಡಿದೆ. ಕರ್ನಾಟಕದಲ್ಲಿ ಹಲವು ಸಮುದಾಯಗಳ ಜನರು ನೆಲೆಸಿದ್ದಾರೆ. ಅವುಗಳಲ್ಲಿ ಕೊರಗರ ಕನ್ನಡ, ಗೊಂಡರ ಕನ್ನಡ, ಕರೆ ಒಕ್ಕಲರ ಕನ್ನಡ, ಜೇನು ಕುರುಬರ ಕನ್ನಡ, ಇಲ್ಲಿಗರ ಕನ್ನಡ, ಸೋಲಿಗ ಕನ್ನಡಗಳನ್ನು

ಸಾಮಾಜಿಕ ಉಪಭಾಷಾ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಐತಿಹಾಸಿಕ ಉಪಭಾಷೆಗಳೆಂಬ ಅಧ್ಯಾಯವು ಕನ್ನಡ ಭಾಷೆ ಕಾಲದಿಂದ ಕಾಲಕ್ಕೆ ಬದಲಾವಣೆಗೆ ಒಳಗಾದುದನ್ನು ದಾಖಲಿಸುತ್ತದೆ. ಮೊದಲನೆ ಅಧ್ಯಾಯವು ಉಪಭಾಷೆ ಎಂದರೇನು, ಉಪಭಾಷೆಯ ಸ್ವರೂಪ ವ್ಯಾಪ್ತಿಯನ್ನು ವಿವರಿಸುತ್ತದೆ. ಎರಡನೇ ಅಧ್ಯಾಯವು ಉಪಭಾಷೆ ಉಂಟಾಗಲು ಕಾರಣಗಳೇನು ಎಂಬುದನ್ನು ಚರ್ಚಿಸುತ್ತದೆ. ಈ ಅಧ್ಯಯನದ ಕೊನೆಯ ಭಾಗವು ಈ ಎಲ್ಲಾ ಉಪಭಾಷೆಗಳ ವೈಶಿಷ್ಟ್ಯಗಳನ್ನು ಮತ್ತು ಪ್ರಮಾಣ ಭಾಷೆಗೂ ಉಪಭಾಷೆಗೂ ಇರುವ ಅಂತರವನ್ನು ಗುರುತಿಸುತ್ತದೆ.

## ಅಧ್ಯಾಯ–2

# ಉಪಭಾಷೆ – ಸ್ವರೂಪ – ವ್ಯಾಪ್ತಿ

'ಭಾಷೆ ಹಲವಾರು ಉಪಭಾಷೆಗಳ ಸಂಗ್ರಹ'. ಯಾವುದನ್ನು ಭಾಷೆ ಎನ್ನಬೇಕು ಉಪಭಾಷೆ ಎನ್ನಬೇಕು ಎಂಬುದೇ ಮುಖ್ಯ ಸಮಸ್ಯೆ, ಏಕೆಂದರೆ ಪ್ರತಿಯೊಂದು ಭಾಷೆಯು ಮೊದಲಿಗೆ ಒಂದು ಉಪಭಾಷೆಯಾಗಿರುತ್ತದೆ. ಕರ್ನಾಟಕದಲ್ಲಿ ಬೆಂಗಳೂರು ಕನ್ನಡ ಪ್ರಮಾಣ ಭಾಷೆಯಾಗಿದೆ. ರಾಜಕೀಯ ಆಡಳಿತಾತ್ಮಕ ಕಾರಣಗಳಿಂದ ಉಪಭಾಷೆಯಾದ ಬೆಂಗಳೂರು ಕನ್ನಡಕ್ಕೆ ಈ ಸ್ಥಾನಮಾನ ದೊರೆತಿದೆ. ಬರಹವನ್ನು ಹೊರತು ಪಡಿಸಿದರೆ ಮೈಸೂರಿನ ವ್ಯಕ್ತಿ ಮೈಸೂರು ಕನ್ನಡವನ್ನು, ಧಾರವಾಡ ವ್ಯಕ್ತಿ ಧಾರವಾಡದ ಕನ್ನಡವನ್ನು, ಗುಲ್ಬರ್ಗಾದ ವ್ಯಕ್ತಿ ಗುಲ್ಬರ್ಗಾ ಕನ್ನಡದಲ್ಲಿ ಮಾತನಾಡುತ್ತಿರುತ್ತಾನೆ. ಹೀಗೆ ಒಂದು ಭಾಷೆ ಹಲವು ಉಪಭಾಷೆಗಳನ್ನು ಹೊಂದಿರುತ್ತದೆ.

ಭಾಷೆ ಮತ್ತು ಉಪಭಾಷೆಗಳು ಒಂದು ಕಡೆ ಅಂತ್ಯವನ್ನು ಪಡೆಯುತ್ತವೆ. ಒಂದು ಮತ್ತೊಂದರಲ್ಲಿ ಸೇರಿಕೊಳ್ಳುತ್ತದೆ. ಕಾವೇರಿ ನದಿ ಎಂಬುದು ವಾಸ್ತವವಾಗಿ ಅಮೂರ್ತ. ಅದಕ್ಕೆ ಹಲವು ಉಪನದಿಗಳು ಸೇರಿ ವಿಶಾಲವಾದ ದೊಡ್ಡ ನದಿಯಾಗಿ ಕಂಗೊಳಿಸುತ್ತದೆ. ಅಂತೆಯೇ ಕನ್ನಡ ಭಾಷೆಗೆ ಹಲವು ಉಪಭಾಷೆಗಳು ಮೂರ್ತ ರೂಪ ನೀಡುತ್ತವೆ. ಒಂದು ಭಾಷೆಯ ಧ್ವನಿ ಸಮೂಹವನ್ನು ನಿರ್ಧರಿಸುವುದು ಉಪಭಾಷೆಗಳೇ ಆಗಿರುತ್ತದೆ. ಭಾಷೆಯ ಒಳಗೆ ಉಪಭಾಷೆಗಳು ನಿರಂತರವಾಗಿ ಪ್ರವಹಿಸುತ್ತಿರುತ್ತದೆ.

ಭಾಷೆ ಮತ್ತು ಉಪಭಾಷೆಗಳ ನಡುವಿನ ಸಂಬಂಧ ಗಾಢವಾದುದು. ಉಪಭಾಷೆಯನ್ನು ಭಾಷೆಯೊಡನೆ ಹೋಲಿಸುವದಕ್ಕಿಂತ ಉಪಭಾಷೆಯೊಡನೆ ಮತ್ತೊಂದು ಉಪಭಾಷೆಯನ್ನು ಹೋಲಿಸುವುದರಿಂದ ಉಪಭಾಷೆಗಳ ಸ್ವರೂಪವನ್ನು ಖಚಿತವಾಗಿ ತಿಳಿಯಬಹುದು.

ಭಾಷೆಯೊಂದು ಹಲವು ಉಪಭಾಷೆಗಳ ಸಂಗ್ರಹ. ಭಾಷೆಗೆ ಅನ್ವಯವಾಗುವ ಎಲ್ಲಾ ಲಕ್ಷಣಗಳು ಉಪಭಾಷೆಗೂ ಅನ್ವಯಿಸುತ್ತದೆ. ಒಂದು ಭಾಷೆಯ ಧ್ವನಿ, ಧ್ವನಿಮಾ, ಆಕೃತಿಮಾ, ವ್ಯಾಕರಣ ಮೊದಲಾದವನ್ನು ಅರಿಯಬೇಕಾದರೆ ಆ ಭಾಷೆಯ ಉಪಭಾಷೆಗಳನ್ನು ಪರಿಶೀಲನೆ ಮಾಡಬೇಕಾಗುತ್ತದೆ. ಕನ್ನಡ ಭಾಷಾ ಪರಿಶೀಲನೆಯಲ್ಲಿ ಕರ್ನಾಟಕದಲ್ಲಿರುವ ಪ್ರಾದೇಶಿಕ ಮತ್ತು ಸಾಮಾಜಿಕ ಉಪಭಾಷೆಗಳನ್ನು ಗಣನೆಗೆ ತೆಗೆದುಕೊಳ್ಳ ಬೇಕಾಗುತ್ತದೆ.

ಭಾಷೆ ಮತ್ತು ಉಪಭಾಷೆಗಳ ನಡುವೆ ಹಲವು ಸೂಕ್ಷ್ಮ ವ್ಯತ್ಯಾಸಗಳಿರುತ್ತದೆ. ಒಂದು ಸಮಾಜದಲ್ಲಿ ಹಲವಾರು ಭಾಷಿಕ ಪ್ರಭೇದಗಳಿರುತ್ತವೆ. ಈ ಎಲ್ಲಾ ಭಾಷಿಕ ಪ್ರಭೇದಗಳು ಸೇರಿ

ಆ ಸಮಾಜದ ಭಾಷೆ ರೂಪುಗೊಂಡಿರುತ್ತದೆ. ಕನ್ನಡ ಭಾಷೆಯಲ್ಲಿ ಮೈಸೂರು ಕನ್ನಡ, ಧಾರವಾಡ ಕನ್ನಡ, ಗುಲ್ಬರ್ಗಾ ಕನ್ನಡ, ಕರಾವಳಿ ಕನ್ನಡ ಮೊದಲಾದ ಪ್ರಾದೇಶಿಕ ಉಪಭಾಷೆಗಳು, ಕೊರಗರ ಕನ್ನಡ, ಗೊಂಡರ ಕನ್ನಡ, ಕರೆ ಒಕ್ಕಲರ ಕನ್ನಡ, ಜೇನು ಕುರುಬರ ಕನ್ನಡ, ಇಲ್ಲಿಗರ ಕನ್ನಡ, ಸೋಲಿಗ ಕನ್ನಡ ಮೊದಲಾದ ಸಾಮಾಜಿಕ ಉಪಭಾಷೆಗಳಿವೆ. ಈ ಎಲ್ಲಾ ಉಪಭಾಷೆಗಳಿಂದ ಕನ್ನಡ ಭಾಷೆ ಎಂಬುದಾಗಿದೆ. ಕನ್ನಡ ಭಾಷೆಯ ರಚನೆ–ವಿನ್ಯಾಸ–ವಿಕಾಸಕ್ಕೆ ಈ ಉಪಭಾಷೆಗಳು ತಮ್ಮ ಕೊಡುಗೆಯನ್ನು ನೀಡುತ್ತವೆ.

ಭಾಷೆ ಮತ್ತು ಉಪಭಾಷೆಗಳ ಸಂಬಂಧವನ್ನು ಕೆಲವು ವಿದ್ವಾಂಸರ ವ್ಯಾಖ್ಯಾನಗಳ ಮೂಲಕ ಪರಿಶೀಲಿಸಬಹುದು. "ಒಂದೇ ಸಮುದಾಯಕ್ಕೆ ಸೇರಿದ ಜನರು ಆಡುವ ನಾನಾ ವೈವಿಧ್ಯಗಳಿಂದ ಕೂಡಿರುವ ಒಂದು ಭಾಷಾ ಪ್ರಭೇದವನ್ನೇ ಉಪಭಾಷೆ"[1]ಎನ್ನುವರು ಒಂದು ಸಮುದಾಯಕ್ಕೆ ಸೇರಿದ ಜನರು ಒಂದೇ ಭಾಷೆಯನ್ನಾಡುತ್ತಿದ್ದರೂ ಪ್ರತಿಯೊಂದು ಪ್ರದೇಶಕ್ಕೆ ಸೇರಿದ ಪ್ರತಿಯೊಂದು ಸಮುದಾಯಕ್ಕೆ ಸೇರಿದ ವ್ಯಕ್ತಿ ಭಾಷೆಯಲ್ಲಿ ಭಿನ್ನತೆ ಇರುತ್ತದೆ. ಧ್ವನಿ, ಧ್ವನಿಮಾ, ಆಕೃತಿಮಾ, ವ್ಯಾಕರಣ ವಾಕ್ಯರಚನೆ ಹೀಗೆ ಹಲವು ಭಾಷಾ ಅಂಶಗಳಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಸಮುದಾಯದಿಂದ ಸಮುದಾಯುಕ್ಕೆ ವ್ಯತ್ಯಾಸಗಳಿರುತ್ತವೆ. ಕನ್ನಡ ಭಾಷೆಯನ್ನು ಮಾತನಾಡುವವರೆಲ್ಲರು ಒಂದೇ ರೀತಿಯ ಕನ್ನಡವನ್ನು ಬಳಸುವುದಿಲ್ಲ. ಪೊರಕೆ ಎಂಬ ಶಬ್ದವನ್ನು ಮೈಸೂರಿನಲ್ಲಿ ಪರಕೆ, ಕಸ್ಪರ್ಕೆ, ಕಸ್ಪರಕೆ, ಎಂದರೆ ಮಂಡ್ಯ ಕಡೆಗಳಲ್ಲಿ ಹಿಡಿ, ಹಿಡಿಗ್ಲು , ಹಿಡ್ಲು, ಬರ್ಲು ಎನ್ನತ್ತಾರೆ. ಧಾರವಾಡ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಪರ್ಕಿ, ಕಸ್ಪರ್ಕಿ, ಕಸ್ಪರಕಿ ಎನ್ನುತ್ತಾರೆ. ಹೀಗೆ ಕನ್ನಡ ಭಾಷೆಯಲ್ಲಿ ಹಲವು ಭಾಷಿಕ ರೂಪಗಳಿವೆ. ಈ ಭಾಷಿಕ ರೂಪಗಳನ್ನೇ ಕನ್ನಡದ ಉಪಭಾಷೆಗಳೆಂದು ಕರೆಯುತ್ತೇವೆ.

"ಉಪಭಾಷೆ ಎನ್ನುವುದು ಒಂದು ಭಾಷಾ ಪ್ರಭೇದ ಅಷ್ಟೇ"[2] ಒಂದು ಭಾಷೆ ಹೆಚ್ಚು ಉಪಭಾಷೆಗಳನ್ನು ಹೊಂದಿರಬಹುದು ಇಲ್ಲವೇ ಕಡಿಮೆ ಉಪಭಾಷೆಗಳನ್ನು ಹೊಂದಿರಬಹುದು ಪ್ರತಿಯೊಂದು ಭಾಷೆಗೂ ಉಪಭಾಷೆಗಳು ಇದ್ದೇ ಇರುತ್ತದೆ. ಒಂದು ನಿರ್ದಿಷ್ಟ ಭಾಷೆಗೆ ಉಪಭಾಷೆಗೆ ಸಂಬಂಧಿಸಿರುತ್ತದೆ. ಅದು ಆ ಭಾಷೆಯ ಪ್ರಭೇದವಾಗಿ ಮಾತ್ರ ಕಾಣಿಸಿಕೊಳ್ಳುತ್ತದೆ. ಕನ್ನಡಕ್ಕೆ ಧಾರವಾಡ ಕನ್ನಡ, ಮೈಸೂರು ಕನ್ನಡ ಮೊದಲಾದ ಉಪಭಾಷೆಗಳಿವೆ. ಇವುಗಳಿಗೂ ತಮಿಳು ಭಾಷೆಗೂ ಅಥವಾ ಬೇರಾವುದೇ ಅನ್ಯಭಾಷೆಗೂ ಯಾವುದೇ ಸಂಬಂಧವಿಲ್ಲ.

---

[1] Dialect may be defined as the Variety of a language spoken by the members of a single homogeneous speech community.
[2] dialect is an individual variety of a language.

ವೆಬ್‌ಸ್ಟರ್ ಉಪಭಾಷೆಯನ್ನು ಹೀಗೆ ವ್ಯಾಖ್ಯಾನಿಸುತ್ತಾರೆ. "ಪರಸ್ಪರ ಅರಿವಿಗೆ ಸಾಮಾನ್ಯ ಭಾಷಿಕ ಅಂಶಗಳನ್ನು ತಕ್ಕಮಟ್ಟಿಗೆ ಹೊಂದಿರುವ ಅನೇಕ ಅಂಶಗಳಲ್ಲಿ ವ್ಯತ್ಯಾಸ ಹೊಂದಿರುವ ಹಲವು ಉಪಭಾಷೆಗಳ ಸಮುದಾಯವನ್ನೇ ಭಾಷೆ ಎಂದು ಕರೆಯಲಾಗುತ್ತದೆ."[3] ಒಂದು ಭಾಷೆಯ ಉಪಭಾಷೆಗಳಲ್ಲಿ ಮೇಲುನೋಟಕ್ಕೆ ಭಾಷಿಕ ಅಂಶಗಳಲ್ಲಿ ಹೋಲಿಕೆಗಳಿದ್ದರೂ ಆಂತರಿಕ ರಚನೆಯಲ್ಲಿ ಅಪಾರ ಪ್ರಮಾಣದ ವ್ಯತ್ಯಾಸವನ್ನು ಗುರುತಿಸಬಹುದು. ಮೈಸೂರು ಕನ್ನಡದಲ್ಲಿ ಆನೆ, ಕುದ್ರೆ, ಒಂಟೆ, ಮನೆ ಎಂಬ ಎ ಕಾರಾಂತ ಪದಗಳು ಧಾರವಾಡ ಕನ್ನಡದಲ್ಲಿ ಆನಿ, ಕುದ್ರಿ, ಒಂಟಿ, ಮನಿ ಎಂದು ಇ ಕಾರಾಂತವಾಗಿ ಪರಿವರ್ತನೆ ಹೊಂದುತ್ತವೆ. ಮೈಸೂರು ಕನ್ನಡದಲ್ಲಿ 'ನಾಳೆ ಬಾ' ಎನ್ನುವುದಕ್ಕೆ ಧಾರವಾಡ ಕನ್ನಡದಲ್ಲಿ 'ಹಿಂದಾಗಡೆ ಬಾ' ಎಂದು ಬಳಸುತ್ತಾರೆ. ವಾಕ್ಯರಚನೆ ಮತ್ತು ಅರ್ಥದಲ್ಲಿ ವ್ಯತ್ಯಾಸವನ್ನು ಈ ಉಪಭಾಷೆಗಳಲ್ಲಿ ಕಾಣಬಹುದು.

"ಒಂದೇ ಭಾಷೆಯ ಬೇರೆ ಬೇರೆ ಪ್ರಭೇದಗಳನ್ನು ಬೇರೆ ಬೇರೆ ಉಪಭಾಷೆಗಳು ಎಂದು ಕರೆಯುವುದು ರೂಢಿ"[4] ಒಂದು ಭಾಷೆಯಲ್ಲಿ ಹಲವು ಸಾಮಾಜಿಕ, ಪ್ರಾದೇಶಿಕ ಭಾಷಾ ಪ್ರಭೇದಗಳಿರುತ್ತವೆ. ಈ ಎಲ್ಲವೂ ಆ ಭಾಷೆಯ ಉಪಭಾಷೆಯಾಗಿರುತ್ತದೆ. ರಾಜಕೀಯ, ಆಡಳಿತಾತ್ಮಕ ಮತ್ತು ಅನ್ಯ ಭಾಷೆಯ ಪ್ರಭಾವ, ಪ್ರಾಕೃತಿಕ ಕಾರಣಗಳು, ಪ್ರಾದೇಶಿಕ, ಸಾಮಾಜಿಕ ಸಂದರ್ಭಕ್ಕನುಗುಣವಾಗಿ ಒಂದು ಭಾಷೆಗೆ ಹಲವು ಉಪಭಾಷೆಗಳು ಸಿದ್ಧಿಸುತ್ತವೆ. ಧ್ವನಿ, ಧ್ವನಿಮಾ, ಆಕೃತಿಮಾ, ವ್ಯಾಕರಣ ವಾಕ್ಯರಚನೆ ಮೊದಲಾದ ಭಾಷಿಕ ಅಂಶಗಳಲ್ಲಿ ಉಪಭಾಷೆಗಳ ನಡುವೆ ವ್ಯತ್ಯಾಸಗಳಿರುತ್ತವೆ. ಗುಲ್ಬರ್ಗಾ, ಬಿಜಾಪುರ, ಬೀದರ್ ಪ್ರದೇಶಗಳು ಮಹಮದೀಯರ ಆಳ್ವಿಕೆಗೆ ಒಳಪಟ್ಟಿತ್ತು. ಈ ಭಾಗದ ಕನ್ನಡದ ಮೇಲೆ ಉರ್ದು ಭಾಷೆಯ ಪ್ರಭಾವದಿಂದಾಗಿ ಗುಲ್ಬರ್ಗಾ ಕನ್ನಡವೆಂಬ ಪ್ರಾದೇಶಿಕ ಉಪಭಾಷೆಯಾಗಿದೆ. ಚಾಮರಾಜನಗರದ ಕನ್ನಡದ ಮೇಲೆ ತಮಿಳು ಭಾಷೆಯ ಪ್ರಭಾವದಿಂದಾಗಿ ಅದೂ ಒಂದು ಪ್ರಾದೇಶಿಕ ಉಪಭಾಷೆಯಾಗಿದೆ. ಕೃಷ್ಣ, ತುಂಗಭದ್ರಾ ನದಿಗಳ ಮಧ್ಯದಲ್ಲಿರುವ ರಾಯಚೂರು ಜಿಲ್ಲೆಯ ಕನ್ನಡ ಅವುಗಳ ಬೇರೆ ಬೇರೆ ದಡಗಳಲ್ಲಿರುವ ಜನರ ಕನ್ನಡಕ್ಕಿಂತ ಭಿನ್ನವಾಗಿದೆ. ಆದ್ದರಿಂದಾಗಿ ರಾಯಚೂರು ಕನ್ನಡ ಕನ್ನಡ ಭಾಷೆಯ ಒಂದು ಉಪಭಾಷೆಯಾಗಿದೆ.

ಈ ಮೇಲಿನ ಚರ್ಚೆಯಿಂದ ಉಪಭಾಷೆಯೆಂದರೇನು ಎಂಬುದನ್ನು ಈ ಕೆಳಕಂಡ ಅಂಶಗಳಲ್ಲಿ ಸ್ಪಷ್ಟಪಡಿಸಬಹುದು.

---

[3] A form of speech actually in natural use in any community as a mode of communicatively narrow limits at any one time

[4] Every language is a collection of many dialects all more or less mutually intelligible an a sharing a common core of structure but differing from one another in many ways.

1. ಉಪಭಾಷೆಗಳು ಒಂದು ನಿರ್ದಿಷ್ಟ ಭಾಷೆಗೆ ಸಂಬಂಧಿಸಿರುತ್ತದೆ.
2. ಉಪಭಾಷೆಗಳು ಒಂದು ಭಾಷೆಯ ಬೇರೆ ಬೇರೆ ಪ್ರಭೇದಗಳು.
3. ಉಪಭಾಷೆಗಳ ಭಾಷಿಕ ಅಂಶಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಅದು ಆ ಉಪಭಾಷೆಯ ವೈಶಿಷ್ಟ್ಯವಾಗಿರುತ್ತದೆ.
4. ಉಪಭಾಷೆಯು ಸೀಮಿತ ಗಡಿರೇಖೆಗಳನ್ನು ಹೊಂದಿರುತ್ತದೆ.
5. ಉಪಭಾಷೆಯು ಆ ಸಮುದಾಯದಲ್ಲಿ ಮಾತ್ರ ಸಂವಹನ ಮಧ್ಯಮವಾಗಿರತ್ತದೆ.

ಉಪಭಾಷೆಯ ಸ್ವರೂಪ ವ್ಯಾಪ್ತಿಯನ್ನು ಉಪಭಾಷೆ ಮತ್ತು ವ್ಯಕ್ತಿಭಾಷೆಯ ನಡುವಿನ ಸಂಬಂಧವನ್ನು ಅರಿಯುವ ಮೂಲಕ ಸ್ಪಷ್ಟಪಡಿಸಿಕೊಳ್ಳಬಹುದು. ಒಬ್ಬ ವ್ಯಕ್ತಿ ಒಂದು ಸಮಯದಲ್ಲಿ ಆಡುವ ಭಾಷೆಯನ್ನು ವ್ಯಕ್ತಿಭಾಷೆ ಎಂದು ಕರೆಯುತ್ತೇವೆ. ಹಾಕೆಟ್ ವ್ಯಕ್ತಿಭಾಷೆಯೆಂದರೆ "ಒಬ್ಬ ವ್ಯಕ್ತಿಯ ಒಂದು ನಿರ್ದಿಷ್ಟ ಸಮಯದ ಮಾತಿನ ಅಭ್ಯಾಸಗಳ ಮೊತ್ತ" ಆಗಿದೆ ಎಂದಿದ್ದಾರೆ.

ಒಂದು ಭಾಷಿಕ ಪರಿಸರದಲ್ಲಿ ವ್ಯವಹರಿಸುತ್ತಿರುವ ಎಲ್ಲಾ ವ್ಯಕ್ತಿಗಳ ಭಾಷೆಯೂ ಒಂದೇ ರೀತಿಯಾಗಿರುವುದಿಲ್ಲ. ಒಬ್ಬ ವ್ಯಕ್ತಿ ಒಮ್ಮೆ ಮಾತನಾಡಿದಂತೆ ಮತ್ತೊಮ್ಮೆ ಮಾತನಾಡಲಾರ. ಸಂದರ್ಭಕ್ಕನುಗುವಾಗಿ ವ್ಯಕ್ತಿಭಾಷೆ ಬೇರೆ ಬೇರೆ ರೀತಿಯಾಗಿರುತ್ತದೆ. ಕೌಟುಂಬಿಕ, ಸಾಮಾಜಿಕ, ಸಾಂಸ್ಕೃತಿಕ ಪರಿಸರದಲ್ಲಿ ವ್ಯಕ್ತಿಯ ಮಾತು ಒಂದೇ ರೀತಿಯಿಲ್ಲ. ಕೌಟುಂಬಿಕ ವಲಯದಲ್ಲಿ ಸಲಿಗೆ ಇದ್ದರೆ ಸಾಮಾಜಿಕ ವಲಯದಲ್ಲಿ ಒಂದು ರೀತಿಯ ಶಿಷ್ಟತೆಯನ್ನು ಪ್ರದರ್ಶಿಸುತ್ತಾನೆ. ಹಾಗೆಯೆ ಅಧಿಕಾರಿಗಳೊಂದಿಗೆ, ಹಿರಿಯರೊಂದಿಗೆ ಮಾತನಾಡುವಾಗ ವಿನಯ ಮತ್ತು ಗೌರವಗಳನ್ನು ತೋರಿದರೆ ಸ್ನೇಹಿತರು ಮತ್ತು ಕಿರಿಯರೊಂದಿಗೆ ಸಲಿಗೆ ಮತ್ತು ವಿಶ್ವಾಸಗಳನ್ನು ತೋರುತ್ತಾನೆ. ಈ ಎಲ್ಲಾ ಸಂದರ್ಭಗಳಲ್ಲಿ ಮಾತಿನ ಕಾಕು ಸ್ವಭಾವ ಮುಂತಾದವುಗಳಲ್ಲಿ ಭಿನ್ನತೆಯುಂಟಾಗುತ್ತದೆ. ಅಂದರೆ ಒಂದು ದಿನ ಅಥವಾ ಒಂದು ಗಂಟೆಯಲ್ಲಿ ಒಬ್ಬ ವ್ಯಕ್ತಿ ವಿಭಿನ್ನ ಪರಿಸ್ಥಿತಿಗಳಲ್ಲಿ ವಿಭಿನ್ನ ವ್ಯಕ್ತಿಗಳೊಂದಿಗೆ ಹಲವಾರು ರೀತಿಯಲ್ಲಿ ಮಾತನಾಡಬೇಕಾಗುತ್ತದೆ. ವ್ಯಕ್ತಿಭಾಷೆ ಆ ವ್ಯಕ್ತಿಗೆ ಮಾತ್ರ ಸಂಬಂಧಿಸಿರದೆ ಆತನ ಸಮುದಾಯಕ್ಕೆ ಸಂಬಂಧಿಸಿರುತ್ತದೆ. ವ್ಯಕ್ತಿಭಾಷೆಯು ಸಮಾಜದಿಂದ ಸಮಾಜಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ, ಭಿನ್ನವಾಗಿರುತ್ತದೆ. ಈ ವ್ಯಕ್ತಿಭಾಷೆ ಮೊತ್ತವೇ ಉಪಭಾಷೆ. "ಭಾಷಾ ಸಮುದಾಯವನ್ನು ಪ್ರಾದೇಶಿಕವಾಗಿ ಮತ್ತು ಸಾಮಾಜಿಕವಾಗಿ ಎಷ್ಟೇ ಸೂಕ್ಷ್ಮವಾಗಿ ವ್ಯಾಖ್ಯಾನಿಸಿದರೂ ಅದರ ಸದಸ್ಯರ ಮಾತಿನ

ರೂಪದಲ್ಲಿ ಒಂದು ನಿಶ್ಚಿತ ಅಂತರ ಕಂಡುಬರುತ್ತದೆ. ಅದಕ್ಕಾಗಿ ಪ್ರತಿ ಭಾಷಾ ಸಮುದಾಯದ ಪ್ರತಿ ಸದಸ್ಯನು ಸ್ವಲ್ಪ ಭಿನ್ನವಾಗಿರುವ ಉಪಭಾಷೆಯನ್ನು ಮಾತನಾಡುತ್ತಾನೆ. ಅದು ಅವನ ಸ್ವಂತ ವ್ಯಕ್ತಿಭಾಷೆಯಾಗಿರುತ್ತದೆ.(ರಾಜೇಂದ್ರ ಎಂ ನಾಯಕ, ಪು–18)

"ಭಾಷೆಯ ನಿಜ ಸ್ವರೂಪ ಉಪಭಾಷೆಯಲ್ಲಿರುತ್ತದೆ. ಮತ್ತು ಉಪಭಾಷೆಗಳ ನಿಜ ಸ್ವರೂಪ ವ್ಯಕ್ತಿಭಾಷೆಗಳಿಂದ ನಿರ್ಧಾರಿತವಾಗುತ್ತದೆ."(ಅದೇ ಪು–14) ವ್ಯಕ್ತಿಭಾಷೆ ಉಪಭಾಷೆಗಳ ನಡುವಿನ ಸಂಬಂಧ ಸರಪಳಿರೂಪದಲ್ಲಿರುತ್ತದೆ. ವ್ಯಕ್ತಿಯು ಎಲ್ಲರೊಡನೆ ಒಂದೇ ರೀತಿ ಮಾತನಾಡುವುದಿಲ್ಲ. ವ್ಯಕ್ತಿಭಾಷೆಯಲ್ಲಿನ ಈ ವ್ಯತ್ಯಾಸ ಗುಂಪಿನಿಂದ ಗುಂಪಿಗೆ, ಹಳ್ಳಿಯಿಂದ ಹಳ್ಳಿಗೆ, ಜಿಲ್ಲೆಯಿಂದ ಜಿಲ್ಲೆಗೆ, ಸಮಾಜದಿಂದ ಸಮಾಜಕ್ಕೆ ಭಿನ್ನವಾಗಿರುತ್ತದೆ. ಈ ವ್ಯಕ್ತಿಭಾಷಾ ಗುಂಪನ್ನೇ ಉಪಭಾಷೆಯೆಂದು ಕರೆಯುತ್ತೇವೆ. ಈ ಉಪಭಾಷೆಗಳ ಗುಂಪೇ ಒಂದು ನಿರ್ದಿಷ್ಟ ಪ್ರದೇಶದ ಭಾಷೆ ಎಂದು ಕರೆಸಿಕೊಳ್ಳುತ್ತದೆ. ಆದ್ದರಿಂದಲೇ ಹಾಕೆಟ್ 'ವಿಭಜಿಸಿ ನೋಡಿದಾಗ ಭಾಷೆ ಅನೇಕ ವ್ಯಕ್ತಿಭಾಷೆಗಳ ಮೊತ್ತ' ಎನ್ನುತ್ತಾರೆ. ಉಪಭಾಷೆ ಎಂಬುದು ನಿರ್ದಿಷ್ಟ ವ್ಯಕ್ತಿಯ ಗುಂಪಿನ ಆಡು ಮಾತಿನ ಸ್ವರೂಪವಾಗಿರುತ್ತದೆ. ವ್ಯಕ್ತಿಭಾಷೆಯ ಗುರುತಿಸುವ ಸಂದರ್ಭದಲ್ಲಿ ಆ ವ್ಯಕ್ತಿ ಮಾತನಾಡುವ ಕಾಲ, ಸಂದರ್ಭ, ಸ್ಥಳಗಳು ಮುಖ್ಯವಾಗಿರುತ್ತದೆ. ಅಲ್ಲದೆ ಮಾತನಾಡುವ ವ್ಯಕ್ತಿಯ ಮೇಲೆ ಆ ವ್ಯಕ್ತಿ ಪಡೆದಿರುವ ವಿದ್ಯಾರ್ಹತೆಯು ಪ್ರಭಾವ ಬೀರುತ್ತದೆ. ವ್ಯಕ್ತಿ ಹೆಚ್ಚು ಅಕ್ಷರಸ್ಥನಾದ ಹಾಗೆ ಉನ್ನತ ಪದವಿಯನ್ನು ಪಡೆದ ಹಾಗೆ ಆತನಿಗೇ ತಿಳಿಯದಂತೆ ಆತನ ಭಾಷೆ ಪರಿಷ್ಕೃತಗೊಳ್ಳುತ್ತದೆ. ಇದರಿಂದಾಗಿ ಉಪಭಾಷಾ ವೈವಿಧ್ಯ ಕ್ರಮೇಣ ಕಡಿಮೆಯಾಗುತ್ತದೆ. ವ್ಯಕ್ತಿಯ ಉದ್ಯೋಗ ಕೂಡ ಆತನ ಭಾಷೆಯ ಮೇಲೆ ಪ್ರಭಾವ ಬೀರುತ್ತದೆ. ಕಲ್ಲು ಕುಟಿಗರು, ತರಕಾರಿ ಮಾರುವವರು, ಬಡಗಿಗಳು ಮೊದಲಾದವರ ಭಾಷೆಗೂ ಅಧಿಕಾರಿ, ಅಧ್ಯಾಪಕ, ವೈದ್ಯ, ಇಂಜಿನಿಯರ್ ಮುಂತಾದ ವ್ಯಕ್ತಿಗಳ ಭಾಷೆಗೂ ವ್ಯತ್ಯಾಸವಿದೆ. ವ್ಯಕ್ತಿಭಾಷೆ ನಮ್ಯವಾದುದು. ಇದರಿಂದಾಗಿ ಉಪಭಾಷೆಗಳ ಸೃಷ್ಟಿ–ನಶಿಸುವಿಕೆ ಎರಡೂ ಸಂಭವಿಸುವ ಸಂದರ್ಭಗಳಿರುತ್ತವೆ. "ವ್ಯಕ್ತಿಭಾಷೆಯಿಂದ ಪ್ರಾರಂಭವಾಗಿ ಪ್ರಭೇದವಾಗಿ ಬೆಳೆದು ಸಾಮಾಜಿಕ ಅಥವಾ ಪ್ರಾದೇಶಿಕ ಉಪಭಾಷೆಯಾಗಿ ಅನಂತರ ಭಾಷೆಯಲ್ಲಿ ವಿಲೀನಗೊಳ್ಳುವ ಈ ಭಿನ್ನತೆ ಯಾವುದೇ ಜೀವಂತ ಭಾಷೆಯ ಅವಿಭಾಜ್ಯ ಅಂಗ" (ಆರ್.ಸಿ ಹಿರೇಮಠ, ಪು–6)

ವ್ಯಕ್ತಿ ಭಾಷೆ ಒಂದು ಸಮುದಾಯದ ಭಾಷೆಯಾಗಿದ್ದಾಗ ಮಾತ್ರ ಅದು ಉಪಭಾಷೆಯಾಗಿ ಅಸ್ತಿತ್ವವನ್ನು ಪಡೆಯುತ್ತದೆ. ಅಲ್ಲದೆ ವ್ಯಕ್ತಿ ಭಾಷೆ ಪರಿಭಾಷೆಯಾದಾಗ ಅದು ಉಪಭಾಷೆಯ ಹುಟ್ಟಿಗೆ ಕಾರಣವಗುವುದಿಲ್ಲ. "ಸಾಮಾಜಿಕ ಸಂದರ್ಭಕ್ಕನುಗುಣವಾಗಿ ಉಪಯೋಗಿಸಲ್ಪಡುವ ಭಾಷಾ ಪ್ರಭೇದ ರೂಪವೇ ಪರಿಭಾಷೆ:ರೆಜಿಸ್ಟರ್" (ರಾಜೇಂದ್ರ ಎಂ ನಾಯಕ್, ಪು–20) ವ್ಯಕ್ತಿ ವಿವಿಧ ಸಂದರ್ಭದಲ್ಲಿ ಅಂದರೆ ರಾಜಕೀಯ, ನ್ಯಾಯಾಲಯ, ಶಿಕ್ಷಣ, ದೇವಾಲಯ ಮೊದಲಾದ ಸಾಂಸ್ಕೃತಿಕ ವಲಯದಲ್ಲಿ ಬಳಸಲ್ಪಡುವ ಮಾತಿನ ಸ್ವರೂಪ ಆ ವ್ಯಕ್ತಿಯ 'ಆಡು ಮಾತಿನ ಶೈಲಿ' ಯಾಗಿರುತ್ತದೆ. ಈ ಶೈಲಿ ಬಹುಸಂಖ್ಯಾತ ಸಮುದಾಯ ಇಲ್ಲವೆ ಸಮಾಜದ ಆಡುಮಾತಿನ ಶೈಲಿಯಾದರೆ ಅದು ಉಪಭಾಷೆ ಎನಿಸುತ್ತದೆ. ಇಲ್ಲದಿದ್ದರೆ ಅದು ವ್ಯಕ್ತಿಯ ವೈಯಕ್ತಿಕ ಶೈಲಿಯಾಗಿ ಮಾತ್ರ ಉಳಿಯುತ್ತದೆ. "ನಾವು ಉಪಭಾಷೆಗಳ ತುಲನೆ ಮಾಡುವಾಗ ಸಹಜವಾಗಿ ಸಂಪೂರ್ಣ ಭಿನ್ನ ಭಾಷಿಕ ಸಂದರ್ಭಗಳನ್ನು ತುಲನೆ ಮಾಡುತ್ತೇವೆ. ಮಾತುಗ ಕೇಳುಗ ಮತ್ತು ಸಂದರ್ಭಗಳು ಇವೆಲ್ಲವೂ ಒಂದು ಉಪಭಾಷೆ ಮತ್ತು ಇನ್ನೊಂದರ ನಡುವೆ ಬದಲಾಗುತ್ತವೆ. ಇನ್ನೊಂದು ಹಂತದಲ್ಲಿ ವೈಯಕ್ತಿಕವಾಗಿ ಮಾತುಗನಲ್ಲಿ ಭಿನ್ನತೆ ತೋರಿದಾಗ ಅದು 'ಪರಿಭಾಷೆ' ಎನಿಸಿಕೊಳ್ಳುತ್ತದೆ." (ಅದೇ, ಪು–19)

ಎಲ್ಲ ಉಪಭಾಷೆಗಳು ಮತ್ತು ಅವುಗಳಿಗೆ ಪೂರಕವಾಗಿರುವ ಎಲ್ಲಾ ಉಪಭಾಷೆಗಳು ಭಾಷಾ ಪದ್ಧತಿಗನುಣವಾಗಿ ಸಮಾನಾಂತರವಾಗಿರುತ್ತವೆ. ಒಂದು ಭಾಷೆಯ ಎಲ್ಲಾ ಪ್ರಭೇದಗಳು ರಚನೆ ಸಂಕೀರ್ಣತೆ ಮತ್ತು ನಿಯಮಬದ್ಧ ಪದ್ಧತಿಗಳಿಂದ ಆಯಾ ಭಾಷೆಯನ್ನಾಡುವವ ಅವಶ್ಯಕತೆಗಳಿಗೆ ಪೂರಕವಾಗಿರುತ್ತದೆ." (ರಾಜೇಂದ್ರ ಎಂ ನಾಯಕ್, ಪು–16) ಆದ್ದರಿಂದಾಗಿಯೇ ಭಾಷೆಯಲ್ಲಿ ಹಲವು ಭಾಷಾ ರೂಪಗಳು ಸಾಧ್ಯವಾಗಿದೆ. ಭಾಷೆಯೊಂದು ಪ್ರಾದೇಶಿಕ, ಸಾಮಾಜಿಕ, ಸಂದರ್ಭಕ್ಕನುಗುಣವಾಗಿ ಹಲವು ಭಾಷಿಕ ರೂಪಗಳಾಗಿ ಹೊರಹೊಮ್ಮುತ್ತದೆ. ಈ ಭಾಷಿಕ ರೂಪಗಳೇ ಉಪಭಾಷೆಗಳೆನಿಸುತ್ತದೆ. ಒಂದೊಂದು ಪ್ರದೇಶ ಮತ್ತು ಸಮಾಜದಲ್ಲಿರುವ ಇಂತಹ ಭಾಷಿಕ ರೂಪಗಳ ವೈಜ್ಞಾನಿಕ ಅಧ್ಯಯನವೇ ಉಪಭಾಷಾ ವಿಜ್ಞಾನವಾಗಿದೆ. ಒಂದು ಭಾಷೆಯಲ್ಲಿ ಕಂಡುಬರುವ ಬರಿಯ ಉಚ್ಚಾರಣ ಭಿನ್ನತೆಗಳು ಉಪಭಾಷೆ ಎನಿಸುವುದಿಲ್ಲ ಒಂದು ಭಾಷಾ ಪ್ರಭೇದಗಳಲ್ಲಿ ಕಂಡುಬರುವ ಧ್ವನಿ, ಪದ, ರೂಪ, ವಾಕ್ಯ, ಅರ್ಥ, ಉಚ್ಚಾರಗಳಲ್ಲಿನ ಭಿನ್ನತಯೇ ಉಪಭಾಷೆಗಳೆಂದು ಗುರುತಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. "ಉಚ್ಚಾರ ವೈವಿಧ್ಯ ಕೇವಲ ಉಚ್ಚಾರಣ ಭಿನ್ನತೆಗೆ ಸಂಬಂಧಿಸಿದ್ದಾಗಿದೆಯೇ ಹೊರತು ಉಪಭಾಷೆಗಲ್ಲ ಒಂದು

ಭಾಷೆಯ ಬೇರೆ ಬೇರೆ ಥರಗಳ ಶಬ್ದ ಸಂಪತ್ತು, ವ್ಯಾಕರಣ ಮತ್ತು ಉಚ್ಚಾರಣೆಗಳ ಭಿನ್ನತೆ" (ಅದೇ, ಪು–26) ಉಪಭಾಷೆ ಎಂದು ಕರೆಸಿಕೊಳ್ಳುತ್ತದೆ.

ಒಂದು ಭಾಷಾ ಪ್ರಭೇದವನ್ನು ಆಡುವ ವ್ಯಕ್ತಿ ಇನ್ನೊಬ್ಬ ವ್ಯಕ್ತಿ ಆಡುವ ಮಾತು ನೂರಕ್ಕೆ ನೂರರಷ್ಟು ಅರ್ಥವಾಗುವಂತಿದ್ದರೆ ಅವರಿಬ್ಬರು ಆಡುತ್ತಿರುವುದು ಒಂದೇ ಭಾಷೆಯ ಒಂದೇ ಉಪಭಾಷೆ ಎಂದು ಸುಲಭವಾಗಿ ಗುರುತಿಸಬಹುದು. ಅದೇ ರೀತಿ ವ್ಯಕ್ತಿಗಳು ಆಡುವ ಮಾತು ಪರಸ್ಪರ ಪೂರ್ಣವಾಗಿ ಅರ್ಥವಾಗದಿದ್ದರೆ ಅವರು ಆಡುವುದು ಬೇರೆ ಬೇರೆ ಭಾಷೆಯಾಗಿರುತ್ತದೆ ಅಥವಾ ಬೇರೆ ಭಾಷೆಯ ಉಪಭಾಷೆಗಳಾಗಿರುತ್ತದೆ. ಇಬ್ಬರು ವ್ಯಕ್ತಿಗಳು ಆಡುವ ಮಾತು ಸಂಪೂರ್ಣವಾಗಿ ಅರ್ಥವಾಗುವ ಸ್ಥಿತಿಯಲ್ಲಿ ಇರದೆ ಬಹುಮಟ್ಟಿಗೆ ಅರ್ಥವಾಗಬಹುದಾದ ಮಧ್ಯ ಸ್ಥಿತಿಯಲ್ಲಿರುವ ವ್ಯಕ್ತಿಭಾಷೆಗಳು ಸಾಮಾನ್ಯವಾಗಿ ಒಂದೇ ಭಾಷೆಯ ಉಪಭಾಷೆಗಳಾಗಿರುತ್ತದೆ.

ಭಾಷಾವಿಜ್ಞಾನದಲ್ಲಿ ಆಡುಮಾತಿನ ಅಧ್ಯಯನಕ್ಕೆ ದೊರೆತ ಪ್ರಾಮುಖ್ಯತೆಯಿಂದಾಗಿ ಉಪಭಾಷಾ ಅಧ್ಯಯನಕ್ಕೆ ನಾಂದಿಯಾಯಿತು. ಅದುವರೆಗೆ ಭಾಷಾವಿಜ್ಞಾನದಲ್ಲಿ ಬರಹದ ಭಾಷೆಯನ್ನು ಕುರಿತ ಅಧ್ಯಯನಕ್ಕೆ ಪ್ರಾಮುಖ್ಯತೆ ನೀಡಲಾಗಿತ್ತು. ಭಾಷೆ ಕುರಿತು ರಚನೆಯಾದ ವ್ಯಾಕರಣ ಶಿಷ್ಟ ಭಾಷೆಗೆ ಸಂಬಂಧಿಸಿತ್ತು. ಶಿಷ್ಟಭಾಷೆ ಶ್ರೇಷ್ಟ, ಅಲ್ಲದವು ಕೀಳು ಎಂಬ ಭೇದ–ಬಾವ ಮನೆಮಾಡಿತ್ತು. ಉಪಭಾಷಾವಿಜ್ಞಾನದಿಂದಾಗಿ ಭಾಷೆಯ ಸ್ವರೂಪ ನಿರ್ಧಾರವಾಗುವುದು ಉಪಭಾಷೆಗಳಿಂದ ಎಂಬ ಸತ್ಯ ಅರಿವಿಗೆ ಬಂದಿತು. "ಉಪಭಾಷೆಯೆಂದರೆ ಒಂದು ಭಾಷೆಯ ಗ್ರಾಮ್ಯರೂಪವೆಂದಾಗಲಿ ಅಥವಾ ಯಾವುದೇ ಬಗೆಯ ಸಂಕುಚಿತ ಅರ್ಥಹೊಂದಿರುವ ಭಾಷಾರೂಪವಲ್ಲ."(ಹಂಪನಾ, ಪು–378) ಎಂಬ ಅಭಿಪ್ರಾಯಕ್ಕೆ ಬರಲಾಯಿತು. ಉಪಭಾಷೆಯ ಅಧ್ಯಯನ ಹತ್ತೊಂಭತ್ತನೇ ಶತಮಾನದಲ್ಲಿ ಆರಂಭವಾದರೂ ತನ್ನದೇಯಾದ ಇತಿಹಾಸವನ್ನು ಹೊಂದಿದೆ. ಇಪ್ಪತ್ತನೇ ಶತಮಾನದ ಹೊತ್ತಿಗೆ ಉಪಭಾಷಾ ಅಧ್ಯಯನ ವ್ಯವಸ್ಥಿತ ಅಧ್ಯಯನ ವಿಧಾನಕ್ಕೆ ಹೊರಳಿಕೊಂಡಿತು.

ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ, ಪತಂಜಲಿಯ ಮಹಾಭಾಷ್ಯದಲ್ಲಿ ಭಾಷಾ ಪ್ರಭೇದಗಳ ಕುರಿತ ವಿವೇಚನೆಯಿದೆ. ಕೇಶಿರಾಜನು ಶಬ್ದಮಣಿದರ್ಪಣದಲ್ಲಿ ಕನ್ನಡದ ಭಾಷಾ ಪ್ರಭೇದಗಳನ್ನು ಗುರುತಿಸುತ್ತಾನೆ. ಹಾಗೆಯೇ ನಾಗವರ್ಮ, ಭಟ್ಟಾಕಳಂಕ ತಮ್ಮ ವ್ಯಾಕರಣ ಕೃತಿಯಲ್ಲಿ ಆಗಿನ ಕಾಲದಲ್ಲಿದ್ದ ಕನ್ನಡ ಭಾಷೆಯ ಬೇರೆ ಬೇರೆ ಪ್ರಭೇದಗಳನ್ನು ಉಲ್ಲೇಖಿಸಿದ್ದಾರೆ. ತಮಿಳಿನ ತೊಲ್ಕಾಪಿಯಂ, ತೆಲುಗಿನ ಆಂಧ್ರಶಬ್ದಚಿಂತಾಮಣಿ,

ಮಲೆಯಾಳಂನ ಲೀಲಾತಿಲಕಂ ಪ್ರಾಚೀನ ವ್ಯಾಕರಣ ಗ್ರಂಥಗಳು ಆಯಾ ಭಾಷೆಯ ಭಾಷಾ ಪ್ರಭೇದಗಳನ್ನು ಗುರುತಿಸಿವೆ. ಒಂಬತ್ತನೇ ಶತಮಾನಕ್ಕೆ ಸೇರಿದ ಕವಿರಾಜಮಾರ್ಗ ಕೃತಿಯಲ್ಲಿ ಮಾರ್ಗಕಾರ ಹೇಳುವ ಉತ್ತರ, ದಕ್ಷಿಣ ಮಾರ್ಗಗಳನ್ನು ಉಪಭಾಷೆಗಳಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಕೆಲವು ಸಾಹಿತ್ಯ ಪ್ರಕಾರಗಳಲ್ಲಿ ದೇಸಿ, ಮಣ್ಣಿನಸೊಗಡು, ಜಾನಪದ ಎಂಬ ಹೆಸರಿನಲ್ಲಿ ಉಪಭಾಷೆಗಳನ್ನು ಬಳಸುವುದು ಉಚಿತ ಎನ್ನಲಾಗಿದೆ. ಪ್ರಾಚೀನ ಕೃತಿಗಳಲ್ಲಿ ಉಪಭಾಷಾರೂಪಗಳ ಬಗೆಗಿನ ಮಾಹಿತಿ ಆಂಶಿಕವಾಗಿದೆಯೇ ಹೊರತು ಸಮಗ್ರವಾಗಿ ಸುಸಂಬದ್ಧವಾಗಿ ಇಲ್ಲ.

ಉಪಭಾಷೆಯ ಕುರಿತ ವೈಜ್ಞಾನಿಕ ಅಧ್ಯಯನ ಆರಂಭವಾದುದು ಇಪ್ಪತ್ತನೆ ಶತಮಾನದಲ್ಲಿ "ಧ್ವನಿವ್ಯತ್ಯಾಸಗಳು ಭಾಷೆಯಲ್ಲಿ ಅಪವಾದವೇ ಇಲ್ಲದೇ ನಿಯಮಬದ್ಧವಾಗಿ ನಡೆಯುತ್ತದೆ". (ಕೆ.ವಿ ನಾರಾಯಣ, ಭಾಷೆ, ಪು–41) ಎಂಬಮಾತು ಉಪಭಾಷಾ ಅಧ್ಯಯನಕ್ಕೆ ಪ್ರೇರಣೆ ನೀಡಿತು. 1889 ರಲ್ಲಿ ಎಲ್ಲಿಸ್ ಆರಂಭಿಸಿದ ಇಂಗ್ಲೀಷ್ ಉಪಭಾಷೆಗಳಲ್ಲಿಯ ಧ್ವನಿ ವ್ಯವಸ್ಥೆಯ ಪರಿವೀಕ್ಷಣೆ, 1876 ರಲ್ಲಿ ಕರೆಂಜನ್ ಉಪಭಾಷೆಗಳ ಕುರಿತು ಕೈಗೊಂಡ ವಿಂಟ್ಲರನ ಅಧ್ಯಯನ, 1976 ರಲ್ಲಿ ಜರ್ಮನಿಯಲ್ಲಿ ಜಾರ್ಜ ವೆಂಕರ್ ನೆಡೆಸಿದ ಉಪಭಾಷಾ ಅಧ್ಯಯನ ಮೊದಲಾದವು ಉಪಭಾಷಾ ಅಧ್ಯಯನಕ್ಕೆ ಭದ್ರಬುನಾದಿಯನ್ನು ಹಾಕಿಕೊಟ್ಟವು. ಮತ್ತು ಉಪಭಾಷಾ ಅಧ್ಯಯನದ ಮಹತ್ವವನ್ನು ಎತ್ತಿಹಿಡಿದವು.

ಉಪಭಾಷೆಯನ್ನು ಅತ್ಯಂತ ಸಂಯೋಜಿತ ಸುಸಂಬದ್ಧ ರೀತಿಯಲ್ಲಿ ಪರಿವೀಕ್ಷಣೆ ನಡೆಸಿದವನೆಂದರೆ ಗಿಲಿಯರೊನ್. ಈತನ ವೈಜ್ಞಾನಿಕ ಪರಿವೀಕ್ಷಣೆಯಿಂದಾಗಿ ಖಚಿತ ಮಾಹಿತಿಗಳನ್ನು ಸಂಗ್ರಹಿಸಲು ಸಾಧ್ಯವಾಯಿತು. ಇದರ ಫಲವೇ ಈತ 1950 ಪ್ರಕಟಿಸಿದ "ATLAS LINGUISTIQUE DELA FRANCE" . ಇದರಿಂದಾಗಿಯೇ ಈತನನ್ನು ಉಪಭಾಷಾ ಅಧ್ಯಯನದ ಪಿತಾಮಹ ಎಂದು ಕರೆಯಲಾಯಿತು. ನಂತರ ನವ ಇಂಗ್ಲೆಡಿನಲ್ಲಿ ಕುರಾತರು ನಡೆಸಿದ ಅಧ್ಯಯನ ಉಪಭಾಷಾ ಅಧ್ಯಯನಕ್ಕೆ ಮಾದರಿಯಾಯಿತು. ಇವರು ಹೊರತಂದ 'HAND BOOK OF THE LINGUISTIC GEOGRAPHY OF NEW ENGLAND' ಉಪಭಾಷಾ ಅಧ್ಯಯನಕ್ಕೆ ಕೈಪಿಡಿಯಾಯಿತು. ಇದೇ ಯೋಜನೆಯಲ್ಲಿಯೇ ಮ್ಯಾಕ್ ಡೇವಿಡ್ 'THE DIALECTS OF AMERICAN ENGLISH' ನ್ನು ಪ್ರಕಟಿಸಿದರು.

ಭಾರತದಲ್ಲಿ ಉಪಭಾಷಾ ಅಧ್ಯಯನವನ್ನು ಆರಂಭಿಸಿದವರೆಂದರೆ ಜಾರ್ಜ ಗ್ರಿಯರ್‌ಸನ್‌ರವರು. LINGUISTIC SURVEY OF INDIA' ಎಂಬ ಬೃಹತ್ ಯೋಜನೆಯಲ್ಲಿ ಭಾರತದ ಉಪಭಾಷೆಗಳ ಅಧ್ಯಯನ ನಡೆಸಿ ಸಂಪುಟಗಳನ್ನು ಪ್ರಕಟಿಸಿದರು. 1964 ರಲ್ಲಿ ಪೂನಾದ ಡೆಕ್ಕನ್ ಕಾಲೇಜು ಭಾರತೀಯ ಭಾಷೆಗಳ ಸರ್ವೇಕ್ಷಣಾ ಕಾರ್ಯವನ್ನು ಮಾಡಿತು. ಅದರಲ್ಲಿ ಕನ್ನಡದ ಪ್ರಾದೇಶಿಕ ಮತ್ತು ಸಾಮಾಜಿಕ ಉಪಭಾಷೆಗಳ ಕುರಿತ ಅಧ್ಯಯನವಿದೆ. ಕನ್ನಡ ಉಪಭಾಷೆಗಳ ಕುರಿತು ಹಲವು ವಿಶ್ವ ವಿದ್ಯಾನಿಲಯಗಳು, ಹಲವು ವಿದ್ವಾಂಸರು, ಸಂಶೋಧಕರು ಅಧ್ಯಯನವನ್ನು ನಡೆಸಿದ್ದಾರೆ. ಡಾ. ಆರ್.ಸಿ ಹೀರೇಮಠ್ ರವರ 'The structure of kannada', ಡಾ. ಕೆ.ಜಿ ಶಾಸ್ತ್ರಿ ಯವರ 'THE Havyaka dilect of north kannada', ಡಾ. ಆರ್. ರಂಗನಾಥನ್‌ರವರ 'The Mysore and Dharvad kannada dilects', ಡಾ. ಹಾ.ಮಾ. ನಾಯಕ್ ರವರ 'Kannada literary and colloquial a study of styles', ಡಾ. ಕೆ.ಎಸ್ ಗುರುಬಸವೇಗೌಡರ ಸೋಲಿಗ ಕನ್ನಡ, ಡಾ. ಎ. ಮುರಿಗಿಯಪ್ಪರವರ ಬೀದರ್ ಕನ್ನಡ, ಡಾ. ಎ.ಎಸ್ ಆಚಾರ್ಯರ ಹಾಲಕ್ಕಿ ಕನ್ನಡ, ಡಾ.ಡಿ.ಎನ್ ಶಂಕರ ಭಟ್ ರವರ ಹವ್ಯಕ ಕನ್ನಡ, ಡಿ. ಪಾಂಡುರಂಗಬಾಬುರವರ ಆದಿ ಜಾಂಬುವರ ಕನ್ನಡ, ಮಹಾದೇವಯ್ಯರವರ ಮುಸ್ಲಿಂ ಕನ್ನಡ ಮೊದಲಾದವು ಕನ್ನಡ ಉಪಭಾಷೆಗಳ ಕುರಿತು ನಡೆದ ಸಂಶೋಧನೆಗಳಾಗಿವೆ.

ಕನ್ನಡ ಉಪಭಾಷೆಗಳಿಗೆ ಸಂಬಂಧಿಸಿದಂತೆ ಅನೇಕ ಲೇಖನಗಳು ಪ್ರಬುದ್ಧ ಕರ್ನಾಟಕ, ಕನ್ನಡ ನುಡಿ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಕರ್ನಾಟಕ ಭಾರತಿಯಲ್ಲಿ ಪ್ರಕಟವಾಗಿವೆ. ಮೈಸೂರು ವಿಶ್ವ ವಿದ್ಯಾನಿಲಯದ ಸುವರ್ಣ ಸಂಚಯ, ಕರ್ನಾಟಕ ವಿಶ್ವ ವಿದ್ಯಾಲಯದ ಕನ್ನಡ ಭಾರತಿಯಲ್ಲಿ ಉಪಭಾಷೆಗೆ ಸಂಬಂಧಿಸಿದ ವಿದ್ವತ್ ಪೂರ್ಣ ಲೇಖನಗಳಿವೆ. ಕನ್ನಡ ವಿಶ್ವ ವಿದ್ಯಾನಿಲಯದ ಕನ್ನಡ ವೃತ್ತಿ ಪದಗಳ ಸಂಗ್ರಹ, ಬೆಂಗಳೂರು ವಿಶ್ವ ವಿದ್ಯಾನಿಲಯದ ಉಪಭಾಷಾ ಕೋಶಗಳು ವ್ಯವಸ್ಥಿತ ಉಪಭಾಷಾ ಅಧ್ಯಯನವನ್ನು ಮಾಡಿದುದರ ಪ್ರತಿ ಫಲಗಳಾಗಿವೆ.

ಅಧ್ಯಾಯ 3

# ಉಪಭಾಷೆಗೆ ಕಾರಣಗಳು

ಭಾಷೆ ನಿತ್ಯ ಪರಿವರ್ತನಾಶೀಲವಾದುದು. ಭಾಷೆ ಕಾಲದಿಂದ ಕಾಲಕ್ಕೆ ಬದಲಾಗುತ್ತದೆ ಮತ್ತು ಬೆಳೆಯುತ್ತದೆ. ಬದಲಾವಣೆಯು ಜೀವಂತ ಭಾಷೆಯ ಲಕ್ಷಣ. ಭಾಷೆಯಲ್ಲಿ ಉಂಟಾಗುವ ಬದಲಾವಣೆ ಆಯಾ ಪ್ರದೇಶ, ಸಮಾಜ ಸಂಸ್ಕೃತಿಯಲ್ಲಾದ ಬದಲಾವಣೆಗೆ ಸಂಬಂಧಿಸಿರುತ್ತದೆ. ಈ ಕಾರಣದಿಂದಾಗಿ ಒಂದು ಭಾಷೆಗೆ ಹಲವು ಭಾಷಿಕ ರೂಪಗಳು ಉಂಟಾಗುತ್ತವೆ. ಇದನ್ನೇ ಉಪಭಾಷೆಯೆಂದು ಕರೆಯಲಾಗುತ್ತದೆ. ವ್ಯಕ್ತಿ ಒಮ್ಮೆ ಉಚ್ಚರಿಸಿದಂತೆ ಮತ್ತೊಮ್ಮೆ ಉಚ್ಚರಿಸಲಾರ. ವ್ಯಕ್ತಿಯಿಂದ ವ್ಯಕ್ತಿಗೆ ಭಾಷೆ ಬದಲಾವಣೆ ಹೊಂದುತ್ತದೆ. ಹಾಗಿದ್ದ ಮೇಲೆ ಪ್ರದೇಶದಿಂದ ಪ್ರದೇಶಕ್ಕೆ, ಸಮಾಜದಿಂದ ಸಮಾಜಕ್ಕೆ ಭಾಷೆಯ ಬೇರೆ ಬೇರೆ ರೂಪಗಳು ಬಳಕೆಯಲ್ಲಿರುವುದು ಸಹಜವೇ ಆಗಿದೆ. ಉಪಭಾಷೆ ಉಂಟಾಗಲು ಕಾರಣಗಳೇನು ಎಂಬುದನ್ನು ತಿಳಿಯುವ ಮೊದಲು ಉಪಭಾಷೆಯನ್ನು ಹೇಗೆ ನಿರ್ಧರಿಸಲಾಗುತ್ತದೆ ಎಂಬುದನ್ನು ತಿಳಿಯಬೇಕಾಗುತ್ತದೆ.

ಭಾಷೆ ಮತ್ತು ಉಪಭಾಷೆಗಳ ನಡುವಿನ ಅಂತರ ತೆಳುವಾದುದು. ಭಾಷೆ ಉಪಭಾಷೆಗಳ ಸಂಗ್ರಹವಾಗಿರುತ್ತದೆ ಮತ್ತು ಅದೂ ಒಂದು ಉಪಭಾಷೆಯಾಗಿರುತ್ತದೆ. ಪ್ರಮಾಣ ಭಾಷೆಯಾಗಿರುವ ಬೆಂಗಳೂರು ಕನ್ನಡ ಮೈಸೂರು ಕನ್ನಡ, ಧಾರವಾಡ ಕನ್ನಡಗಳಂತೆಯೆ ಒಂದು ಉಪಭಾಷೆಯಾಗಿದೆ. ಒಂದು ಭಾಷೆಯ ಬೇರೆ ಬೇರೆ ರೂಪಗಳನ್ನು ಉಪಭಾಷೆ ಎಂದು ಕರೆಯಲಾಗುತ್ತದೆ. ಈ ಉಪಭಾಷೆ ನಿರ್ಧರಿಸಲು ಪರಸ್ಪರ ಅರಿವು, ಸಾಮಾನ್ಯ ತಿರುಳು, ಒಟ್ಟು ವ್ಯವಸ್ಥೆ ಸಹಾಯ ಮಾಡುತ್ತದೆ.

ಒಬ್ಬ ವ್ಯಕ್ತಿ ಮಾತನಾಡುತ್ತಿರುವುದು ಮತ್ತೊಬ್ಬ ವ್ಯಕ್ತಿಗೆ ಪೂರ್ಣವಾಗಿ ಅರ್ಥವಾಗುತ್ತಿದ್ದರೆ ಅವರ ನಡುವೆ ಪರಸ್ಪರ ಅರಿವು ಹೆಚ್ಚಾಗಿದೆ ಎಂದು ಅರ್ಥ. ಒಂದು ವೇಳೆ ಪೂರ್ಣವಾಗಿ ಅರ್ಥವಾಗದಿದ್ದರೆ ಅದು ಉಪಭಾಷೆಯಾಗಲಾರದು. ವ್ಯಕ್ತಿಗಳು ಆಡುವ ಮಾತಿನಲ್ಲಿ ಪರಸ್ಪರ ಅರಿವಿನ ಪ್ರಮಾಣ ಶೇಕಡಾ 40 ಕ್ಕಿಂತ ಕಡಿಮೆ ಇದ್ದರೆ ಅವು ಭಿನ್ನ ಭಾಷೆಗಳಾಗಿರುತ್ತದೆ. ಅರಿವಿನ ಪ್ರಮಾಣ ಶೇಕಡಾ 80 ರಷ್ಟಿದ್ದರೆ ಅದು ಉಪಭಾಷೆಗಳಾಗಿರುತ್ತದೆ. ಉದಾಹರಣೆಗೆ ಕನ್ನಡದ ವ್ಯಕ್ತಿ ತೆಲುಗು ಭಾಷೆಯ ವ್ಯಕ್ತಿಯೊಂದಿಗೆ ಮಾತನಾಡುತ್ತಿದ್ದರೆ ಅವರ ನಡುವಿನ ಪರಸ್ಪರ ಅರಿವಿನ ಪ್ರಮಾಣ ಶೇಕಡಾ 40 ಕ್ಕಿಂತ ಕಡಿಮೆ ಇರುತ್ತದೆ. ಆದ್ದರಿಂದ ಕನ್ನಡ ಮತ್ತು ತೆಲುಗು ಎರಡು ಬೇರೆ ಬೇರೆ

ಭಾಷೆಗಳಾಗಿವೆ. ಧಾರವಾಡದ ಮಾತನಾಡುವ ವ್ಯಕ್ತಿ ಮೈಸೂರು ಕನ್ನಡ ಮಾತನಾಡುವ ವ್ಯಕ್ತಿಯೊಂದಿಗೆ ಮಾತನಾಡುತ್ತಿದ್ದರೆ ಅವರ ನಡುವಿನ ಪರಸ್ಪರ ಅರಿವಿನ ಪ್ರಮಾಣ ಶೇಕಡಾ 60 ಕ್ಕಿಂತ ಹೆಚ್ಚು ಇರುತ್ತದೆ. ಆದ್ದರಿಂದ ಇವು ಕನ್ನಡದ ಉಪಭಾಷೆಗಳಾಗಿವೆ. ಒಂದು ಭಾಷೆಯ ಉಪಭಾಷೆಗಳಾಗಬೇಕಾದರೆ ಪರಸ್ಪರ ಅರಿವಿನ ಪ್ರಮಾಣ ಹೆಚ್ಚಿರ ಬೇಕಾದುದು ಅವಶ್ಯ.

ಒಂದು ಭಾಷೆಯಲ್ಲಿರುವ ಮೂಲ ಅಂಶಗಳ ಅಥವಾ ಸಮಾನ ಭಾಷಿಕ ಅಂಶಗಳನ್ನು ಸಾಮಾನ್ಯ ತಿರುಳು ಎನ್ನಲಾಗುತ್ತದೆ. ಇಬ್ಬರ ಆಡುಮಾತಿನಲ್ಲಿ ಪರಸ್ಪರ ಅರಿವಿನ ಪ್ರಮಾಣ ಹೆಚ್ಚಿದ್ದರೆ ಸಾಮಾನ್ಯ ತಿರುಳು ಹೆಚ್ಚಾಗಿರುತ್ತದೆ. ಪರಸ್ಪರ ಅರಿವಿನ ಪ್ರಮಾಣ ಕಡಿಮೆಯಿದ್ದರೆ ಸಾಮಾನ್ಯ ತಿರುಳು ಕಡಿಮೆ ಇರುತ್ತದೆ. ಕನ್ನಡ ಮತ್ತು ಮರಾಠಿ ಭಾಷೆಯ ನಡುವಿನ ಸಾಮಾನ್ಯ ತಿರುಳು ತುಂಬಾ ಕಡಿಮೆಯಿರುವುದರಿಂದ ಈ ಎರಡೂ ಬೇರೆ ಬೇರೆ ಭಾಷೆಗಳೆನಿಸುತ್ತದೆ. ಬೆಂಗಳೂರು ಕನ್ನಡ ಮೈಸೂರು ಕನ್ನಡಗಳ ನಡುವೆ ಸಾಮಾನ್ಯ ತಿರುಳು ಹೆಚ್ಚಾಗಿರುವುದರಿಂದ ಇವು ಕನ್ನಡದ ಉಪಭಾಷೆಗಳಾಗಿವೆ.

ಇಬ್ಬರು ವ್ಯಕ್ತಿಗಳು ಆಡುವ ಭಾಷೆಯಲ್ಲಿ ಪರಸ್ಪರ ಅರಿವಿನ ಪ್ರಮಾಣ ಮತ್ತು ಸಮಾನ ಭಾಷಿಕಾಂಶಗಳು ಜೊತೆಗೆ ಗ್ರಹಣ ಶಕ್ತಿ, ನಿರ್ಮಾಣ ಶಕ್ತಿ ಉಪಭಾಷೆಯನ್ನು ನಿರ್ಧರಿಸುವ ಅಂಶಗಳಾಗಿವೆ. ಇದನ್ನೇ ಭಾಷೆಯ ಒಟ್ಟು ವ್ಯವಸ್ಥೆ ಎಂದು ಕರೆಯಲಾಗುತ್ತದೆ. ಎರಡು ಬೇರೆ ಬೇರೆ ಭಾಷೆಗಳನ್ನು ಆಡುವ ವ್ಯಕ್ತಿಗಳು ಅವರು ಆಡುವ ಮಾತನ್ನು ಪರಸ್ಪರ ಅರ್ಥಮಾಡಿಕೊಳ್ಳಬಲ್ಲರು ಆದರೆ ಪ್ರತಿಕ್ರಿಯಿಸಲಾರರು. ಅಂದರೆ ಆ ಭಾಷೆಯನ್ನು ಪೂರ್ಣವಾಗಿ ಆಡಲಾರರು ಎಂದು ಅರ್ಥ. ಆ ಭಾಷೆಯನ್ನು ಬಳಸುವ ಸಾಮರ್ಥ್ಯ ಇಲ್ಲ ಆದರೆ ಅವರು ಪರಸ್ಪರ ಅರ್ಥ ಮಾಡಿಕೊಳ್ಳಬಲ್ಲರು. ಅವರಲ್ಲಿ ಭಾಷಾ ರಚನೆಯ ಗ್ರಹಣ ಶಕ್ತಿ ಇದೆಯೇ ಹೊರತು ನಿರ್ಮಾಣ ಶಕ್ತಿ ಇಲ್ಲ. ತಮಿಳು ಭಾಷೆಯನ್ನು ಕನ್ನಡದ ವ್ಯಕ್ತಿ ಅರ್ಥಮಾಡಿಕೊಳ್ಳಬಲ್ಲರು ಆದರೆ ಮಾತನಾಡುವ ಸಾಮರ್ಥ್ಯವಿಲ್ಲ. ಭಾಷೆಯಲ್ಲಿ ನಿರ್ಮಾಣವಾಗುವ ಇಂತಹ ಪರಿಸ್ಥಿತಿಯನ್ನು ಅರ್ಧ ದ್ವಿಭಾಷಿಕತೆ ಎನ್ನುವರು.

ಎರಡು ಭಾಷೆಯಲ್ಲಿ ಪರಸ್ಪರ ಅರಿವಿನ ಪ್ರಮಾಣ ಹೆಚ್ಚಿಲ್ಲದಿದ್ದರೂ ಸಾಮಾನ್ಯ ತಿರುಳು ಇಲ್ಲದಿದ್ದರೂ ಇಬ್ಬರೂ ಪರಸ್ಪರ ಅರ್ಥಮಾಡಿಕೊಳ್ಳಬಲ್ಲರು ಮತ್ತು ನಿರ್ಮಿಸಬಲ್ಲರು. ಹೀಗೆ ಗ್ರಹಣ ಶಕ್ತಿ, ನಿರ್ಮಾಣ ಶಕ್ತಿ ಸಮಾನವಾಗಿರುವ ಸನ್ನಿವೇಶವನ್ನೇ ದ್ವಿಭಾಷಿಕತೆ ಎನ್ನಲಾಗುತ್ತದೆ. ಆದರೆ ಇದು ಉಪಭಾಷೆ ಎನಿಸುವುದಿಲ್ಲ. ವ್ಯಕ್ತಿಯ ಅಗತ್ಯಕ್ಕೆ

ತಕ್ಕಂತೆ ಭಾಷೆಗಳನ್ನು ಕಲಿಯಬಹುದು. ಇದರಿಂದಾಗಿ ದ್ವಿಭಾಷಿಕತೆ ಉಂಟಾಗುತ್ತದೆಯೇ ಹೊರತು ಉಪಭಾಷೆಗಳಲ್ಲ.

ಉಪಭಾಷೆ ಎಂದಮೇಲೆ ಹೆಚ್ಚಿನ ಪರಸ್ಪರ ಅರಿವು, ಸಾಮಾನ್ಯ ತಿರುಳು, ಒಟ್ಟು ವ್ಯವಸ್ಥೆ ಈ ಮೂರು ಅಂಶಗಳು ಇದ್ದೇ ಇರತ್ತದೆ. ಭಾಷೆಯ ವ್ಯಾಪ್ತಿ ವಿಸ್ತಾರವಾದುದು. ಉಪಭಾಷೆಯ ವ್ಯಾಪ್ತಿ ಮಿತಿಯುಳ್ಳದ್ದು. ವ್ಯಕ್ತಿ ಭಾಷಾ ರೂಪಗಳು ಉಪಭಾಷಾರೂಪಗಳಿಗೆ ಕಾರಣವಾದರೆ ಉಪಭಾಷೆಗಳ ಸಂಗ್ರಹ ಭಾಷೆ ಎನಿಸುತ್ತದೆ. ಉಪಭಾಷೆಯೊಂದು ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ ಮಹತ್ವವನ್ನು ಪಡೆದಾಗ ಪ್ರಮಾಣಭಾಷೆ ಎನಿಸಿಕೊಳ್ಳುತ್ತದೆ.

ಉಪಭಾಷೆ ಯಾವುದು ಎಂದು ನಿರ್ಧರಿಸಿದ ಮೇಲೆ ಈ ಉಪಭಾಷೆ ಉಂಟಾಗಲು ಕಾರಣಗಳೇನು ಎಂಬುದನ್ನು ಸುಲಭವಾಗಿ ಗುರುತಿಸಬಹುದು. ಮನುಷ್ಯನ ಸೌಲಭ್ಯಾಕಾಂಕ್ಷೆ, ಉಚ್ಚಾರಣಾ ಭಿನ್ನತೆಗಳು, ಪ್ರತಿಬಂಧಕಗಳು, ಅನ್ಯ ಭಾಷಾ ಆಡಳಿತ, ಅನ್ಯ ಭಾಷಾ ಪ್ರಭಾವ, ಜನ ಸಂಪರ್ಕಕ್ಕೆ ಎದುರಾಗುವ ಅಡೆತಡೆಗಳು, ವಲಸೆ, ಕಾಲ–ದೇಶಗಳು ಉಪಭಾಷೆಯ ಉಗಮಕ್ಕೆ ಕಾರಣವಾಗುತ್ತದೆ.

ಒಂದು ಭಾಷೆ ಒಂದೇ ರೀತಿಯಾಗಿ ಬಳಕೆಯಾಗುವುದಿಲ್ಲ. ನಿರ್ದಿಷ್ಟ ಗಡಿರೇಖೆಯ ಒಳಗೆ ನಿರ್ದಿಷ್ಟ ಕಾಲಾವಧಿಯಲ್ಲಿ ವ್ಯಕ್ತಿಯಿಂದ ವ್ಯಕ್ತಿಗೆ, ಪ್ರದೇಶದಿಂದ ಪ್ರದೇಶಕ್ಕೆ, ಸಮಾಜದಿಂದ ಸಮಾಜಕ್ಕೆ ಭಾಷೆಯ ಬಳಕೆ ಬೇರೆ ಬೇರೆಯಾಗಿರುತ್ತದೆ. ಈ ಭಿನ್ನತೆಯೆ ಉಪಭಾಷೆಗಳ ಉಗಮಕ್ಕೆ ಕಾರಣವಾಗುತ್ತದೆ. ಮಾನವ ಮೂಲತಃ ಸೌಲಭ್ಯಕಾಂಕ್ಷಿ ಆತನ ಉಚ್ಚಾರಣೆಯಲ್ಲಿ ಇದನ್ನು ಗಮನಿಸಬಹುದು. 'ಹೋಗುತ್ತಾಯಿದ್ದನು' ಎಂಬ ಪದವನ್ನು ಮಾತಿನಲ್ಲಿ 'ಹೋಗ್ತಿದ್ದ' ಎಂದಷ್ಟೇ ಹೇಳುತ್ತಾನೆ. ಜೊತೆಗೆ ಹಾಲು, ಹಕ್ಕಿ, ಹಾವು ಮೊದಲಾದ ಪದಗಳು ಉಚ್ಚಾರಣೆಯಲ್ಲಿ ಆಲು, ಅಕ್ಕಿ, ಆವು ಎಂಬುದಾಗಿ ಬಳಕೆಯಾಗುತ್ತದೆ. ಇಂತಹ ಉಚ್ಚಾರಣ ವ್ಯತ್ಯಾಸಗಳೇ ಕ್ರಮೇಣ ಭಾಷಿಕ ರೂಪಗಳಿಗೆ ಕಾರಣವಾಗಿ ಉಪಭಾಷೆಗಳ ಉಗಮಕ್ಕೆ ಕಾರಣವಾಗುತ್ತದೆ.

ಒಂದು ಭಾಷೆಯನ್ನಾಡುವ ಜನರ ನಡುವೆ ಸಂಪರ್ಕ ಹೆಚ್ಚಾಗಿದ್ದಷ್ಟೂ ಭಾಷೆಯಲ್ಲಿ ಹೆಚ್ಚು ಬದಲಾವಣೆಗಳಿಲ್ಲದೆ ಒಂದೇ ರೀತಿಯಾಗಿರುತ್ತದೆ. ಪ್ರಾಕೃತಿಕ, ರಾಜಕೀಯ ಕಾರಣಗಳಿಂದ ಒಂದೇ ಭಾಷಿಕರ ನಡುವೆ ಸಂಪರ್ಕ ಕಡಿಮೆಯಾದಾಗ ಆಡುಮಾತಿನಲ್ಲಿ ಹಲವು ವ್ಯತ್ಯಾಸಗಳಿಗೆ ಕಾರಣವಾಗಿ ಉಪಭಾಷೆಯ ಉಗಮಕ್ಕೆ ಕಾರಣವಗಿದೆ. ಒಂದೇ ಭಾಷಾ ಪ್ರದೇಶದಲ್ಲಿ ಒಂದೇ ಭಾಷೆಯನ್ನಾಡುವ ಜನರೂ

ನೆಲೆಸಿರಬಹುದು. ಈ ಬೇರೆ ಬೇರೆ ಭಾಷೆ ಮಾತನಾಡುವ ಜನರ ಸಂಪರ್ಕದಿಂದ ಭಾಷಾ ಪ್ರಭೇದಗಳು ಉಂಟಾಗುತ್ತವೆ.

ಒಂದು ಭಾಷಿಕ ಪ್ರದೇಶ ವಿಸ್ತಾರವಾದಷ್ಟು ಉಪಭಾಷಾ ರೂಪಗಳು ಹೆಚ್ಚುತ್ತವೆ. ವ್ಯಾಪಾರ, ಉದ್ಯೋಗ, ಜೀವನಕ್ಕಾಗಿ ಒಂದು ಪ್ರದೇಶದ ಜನರು ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗಬಹುದು. ವಲಸೆ ಬಂದ ಜನರ ಭಾಷೆಯ ಮೇಲೆ ಪ್ರಾದೇಶಿಕ ಭಾಷೆಯ ಪ್ರಭಾವ ಇರುತ್ತದೆ. ಇದರಿಂದ ವಲಸೆ ಬಂದ ಜನಸಮುದಾಯದಲ್ಲಿ ಹೊಸದೊಂದು ಉಪಭಾಷೆ ರೂಪುಗೊಳ್ಳುತ್ತದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ವಾಸಿಸುವ ಸಿದ್ಧಿಗಳು ಮತ್ತು ಗೌಳಿಗರು ಇದಕ್ಕೆ ನಿದರ್ಶನವಾಗಿದ್ದಾರೆ. ವಲಸೆ ಬಂದು ನೆಲೆಸಿರುವ ಸಿದ್ಧಿಗಳು ಕೊಂಕಣಿ ಮಿಶ್ರಿತ ಕನ್ನಡವನ್ನು ಬಳಸುತ್ತಾರೆ. ಅನ್ಯ ಭಾಷಿಕ ನೆಲೆಯೊಂದಕ್ಕೆ ಬಂದು ನೆಲೆಸುವ ಜನರ ಮೇಲೆ ಸ್ಥಳೀಯ ಭಾಷೆ ಪ್ರಭಾವ ಬೀರುವುದನ್ನು ಇಲ್ಲಿ ಕಾಣುತ್ತೇವೆ. ಮರಾಠಿ ಮಿಶ್ರಿತ ಕನ್ನಡವನ್ನು ಆಡುವ ಗೌಳಿಗರು ಮೂಲತಃ ಮರಾಠಿಗರು. ಕರ್ನಾಟಕದಲ್ಲಿ ನೆಲೆಸಿರುವ ಗೌಳಿಗರು ಆಡುವ ಮಾತು ಕನ್ನಡದಲ್ಲಿ ಸಾಮಾಜಿಕ ಉಪಭಾಷೆಯ ಉಗಮಕ್ಕೆ ಕಾರಣವಾಗಿದೆ.

ನೈಸರ್ಗಿಕ ಪ್ರತಿಬಂಧಕಗಳಾದ ಮರುಭೂಮಿ, ದ್ವೀಪ, ಜಲಪಾತ, ಜಲಸಂಧಿ, ನದಿ, ಪರ್ವತ, ದಟ್ಟವಾದ ಅರಣ್ಯ ಪ್ರದೇಶ, ಬೆಟ್ಟ ಗುಡ್ಡಗಳು, ಗಡಿ ಭಾಗಗಳು, ಅನ್ಯ ಭಾಷೆಗಳ ಸಂಪರ್ಕ ಮೊದಲಾದವು ಭಾಷಾ ಪ್ರಭೇದಗಳಿಗೆ ಕಾರಣವಾಗುತ್ತದೆ. ನೈಸರ್ಗಿಕ ಅಡೆತಡೆಗಳಿಂದಾಗಿ ಜನರ ನಡುವೆ ಸಂಪರ್ಕ ತಪ್ಪಿಹೋಗಿ ಉಪಭಾಷೆಗಳ ಉಗಮಕ್ಕೆ ಕಾರಣವಾಗುತ್ತದೆ. ಕರ್ನಾಟಕದ ಕರಾವಳಿಯ ಉದ್ದಕ್ಕೂ ಹಬ್ಬಿರುವ ಅರಣ್ಯವು ಕನ್ನಡದಲ್ಲಿ ಕರಾವಳಿ ಕನ್ನಡ, ಬಯಲು ಸೀಮೆಯ ಕನ್ನಡ ಎಂಬ ಉಪಭಾಷೆಗಳಿಗೆ ಕಾರಣವಾಗಿದೆ. ಕೃಷ್ಣಾ, ಮಲಪ್ರಭಾ, ಘಟಪ್ರಭಾ, ಭೀಮಾ, ನೇತ್ರಾವತಿ, ಕಾವೇರಿ ಮೊದಲಾದ ನದಿಗಳು ಕರ್ನಾಟಕದಲ್ಲಿ ಹರಿಯುತ್ತದೆ. ಈ ನದಿಗಳು ಉಪಭಾಷೆಗಳ ನಿರ್ಮಾಣಕ್ಕೆ ಕಾರಣವಾಗಿದೆ. ತುಂಗಭದ್ರಾ ನದಿಯ ಒಂದು ಕಡೆ ರಾಯಚೂರು, ಇನ್ನೊಂದು ಕಡೆ ಬಳ್ಳಾರಿ, ಮತ್ತೊಂದು ಕಡೆ ಧಾರವಾಡ ಜಿಲ್ಲೆಗಳಿವೆ. ತುಂಗಭದ್ರ ನದಿಯಿಂದಾಗಿ ಜನರ ನಡುವೆ ಸಂಪರ್ಕ ಕಡಿಮೆಯಾಗಿ ರಾಯಚೂರು ಕನ್ನಡ, ಬಳ್ಳಾರಿ ಕನ್ನಡ, ಧಾರವಾಡ ಕನ್ನಡ ಎಂಬ ಉಪಭಾಷೆಗಳಿಗೆ ಕಾರಣವಾಗಿದೆ.

ಒಂದು ಭಾಷಿಕ ಪ್ರದೇಶವು ಬೇರೆ ಬೇರೆ ಆಡಳಿತಕ್ಕೆ ಒಳಪಟ್ಟಿರುವುದು ಭಾಷಾ ಪ್ರಭೇದಕ್ಕೆ ಕಾರಣವಾಗುತ್ತದೆ. ಕರ್ನಾಟಕದಲ್ಲಿ ಗುಲ್ಬರ್ಗಾ, ರಾಯಚೂರ್, ಬೀದರ್,

ಜಿಲ್ಲೆಗಳು ನಿಜಾಮರ ಆಡಳಿತಕ್ಕೆ ಒಳಗಾಗಿತ್ತು. ಇಲ್ಲಿ ಕೆಲ ಕಾಲ ಉರ್ದು ಆಡಳಿತ ಭಾಷೆಯಾಗಿತ್ತು. ಈ ಮೇಲಿನ ಜಿಲ್ಲೆಗಳ ಕನ್ನಡದ ಮೇಲೆ ಉರ್ದು ಭಾಷೆಯ ಪ್ರಭಾವವನ್ನು ಕಾಣಬಹುದು. ಈ ಅಂಶ ಗುಲ್ಬರ್ಗಾ ಕನ್ನಡ ಮೈಸೂರು ಕನ್ನಡ, ಕರಾವಳಿ ಕನ್ನಡ ಇತರ ಕನ್ನಡ ಉಪಭಾಷೆಗಳಿಗಿಂತ ಭಿನ್ನವಾಗಿರುವಂತೆ ಮಾಡಿದೆ.

ಅನ್ಯ ಭಾಷೆಗಳ ಸಂಪರ್ಕ ಹೆಚ್ಚಿದಂತೆಲ್ಲಾ ಉಪಭಾಷೆಗಳ ಸಂಖ್ಯೆಯೂ ಹೆಚ್ಚುತ್ತದೆ. ಕನ್ನಡದ ಮೇಲೆ ತಮಿಳು, ತೆಲುಗು, ಮರಾಠಿ, ಮಲೆಯಾಳ, ಕೊಂಕಣಿ, ಉರ್ದು ಮೊದಲಾದ ಭಾಷೆಗಳ ಪ್ರಭಾವದಿಂದಾಗಿ ಬೇರೆ ಬೇರೆ ಉಪಭಾಷೆಗಳು ಉಂಟಾಗಿವೆ. ಈ ಅನ್ಯ ಭಾಷಾ ಸಂಪರ್ಕದಿಂದಾಗಿ ಒಂದೇ ಭಾಷೆಯಲ್ಲಿ ಉಚ್ಚರಣಾ ವೈವಿಧ್ಯತೆಗಳುಂಟಾಗುತ್ತದೆ. ಈ ವೈವಿಧ್ಯತೆಗಳೆ ಕಾಲಕ್ರಮೇಣ ಉಪಭಾಷೆಗಳುಂಟಾಗುವುದಕ್ಕೆ ಕಾರವಾಗುತ್ತದೆ. ಕನ್ನಡದ ಉಪಭಾಷೆಗಳಾದ ಬಿಜಾಪುರ ಕನ್ನಡ ಮೇಲೆ ಉರ್ದು, ಮರಾಠಿಗಳ ಪ್ರಭಾವವಿದೆ, ರಾಯಚೂರು, ಬಳ್ಳಾರಿ, ಕೋಲಾರ, ಚಿತ್ರದುರ್ಗ ಪ್ರದೇಶಗಳ ಕನ್ನಡದ ಮೇಲೆ ತುಳು ಪ್ರಭಾವವಿದೆ. ಕನ್ನಡವು ಅನ್ಯ ಭಾಷೆಗಳೊಂದಿಗೆ ಕೊಳು–ಕೊಡೆಯ ಸಂಬಂಧವನ್ನಿಟ್ಟುಕೊಂಡಿರುವುದರಿಂದ ಈ ಉಪಭಾಷೆಗಳ ನಿರ್ಮಾಣಕ್ಕೆ ಕಾರಣವಾಗಿದೆ.

ನೈಸರ್ಗಿಕ ಪರಿಸರಗಳಂತೆಯೆ ಸಾಮಾಜಿಕ ಪರಿಸರವೂ ಕೂಡ ಉಪಭಾಷೆಗಳ ಉಗಮಕ್ಕೆ ಕಾರಣವಾಗುತ್ತದೆ. ಸಮಾಜ ಜೀವಿಯಾದ ಮಾನವನ ಆಡು ಭಾಷೆ ಜಾತಿ, ಧರ್ಮ, ವೃತ್ತಿ, ಸಂಸ್ಕೃತಿಗಳ ಶ್ರೇಣಿಕರಣಕ್ಕೆ ತಕ್ಕಂತೆ ಬೇರೆ ಬೇರೆ ಭಾಷಿಕ ರೂಪಗಳನ್ನು ಪಡೆಯುತ್ತದೆ. ಉಪಭಾಷೆಯೊಂದು ಒಂದು ಸಮುದಾಯದ ಜನರ ಸಾಮಾಜಿಕ ಅಭಿವ್ಯಕ್ತಿಯಾಗಿರುತ್ತದೆ. ಒಂದು ಜನಾಂಗದಲ್ಲಿ ತೋರುವ ಸಂಸ್ಕೃತಿ, ಸಾಮಾಜಿಕ ಜೀವನ ಭಿನ್ನತೆಯು ಸಾಮಾಜಿಕ ಭಾಷಾ ಪ್ರಭೇದಗಳಿಗೆ ಕಾರಣವಾಗುತ್ತದೆ.

ಒಂದು ಭಾಷಾ ಪ್ರದೇಶದ ಸುತ್ತಲೂ ಗಡಿ ಭಾಗಗಳಲ್ಲಿ ಬೇರೆ ಬೇರೆ ಭಾಷೆಗಳ ಪ್ರಭಾವದಿಂದಾಗಿ ಉಪಭಾಷೆಗಳು ನಿರ್ಮಾಣವಾಗುತ್ತವೆ. ಕರ್ನಾಟಕ ಮತ್ತು ಮಹಾರಾಷ್ಟ್ರ ಗಡಿಭಾಗಗಳಲ್ಲಿ ಬಳಕೆಯಲ್ಲಿರುವ ಕನ್ನಡದಲ್ಲಿ ಮರಾಠಿ ಭಾಷೆಯ ಪ್ರಭಾವವಿದೆ. ಕನ್ನಡದಲ್ಲಿ ಸಹಜವಾಗಿ ಮಹಾಪ್ರಾಣಗಳು ಇಲ್ಲ. ಆದರೆ ಮಾರಾಠಿ ಪ್ರಭಾವದಿಂದ ಪದದ ಆದಿಯಲ್ಲಿಯೇ ಮಹಾಪ್ರಾಣ ಬರುತ್ತದೆ. ಉದಾ: ಖರೆ, ಫೀಕ, ಘಂಟೆ, ಝುಣಕ, ಖಿಚಡಿ, ಠಿಕಾಣಿ ಇತ್ಯಾದಿ. ಇವೆ ಅಲ್ಲದೆ ಮಾಂವಸಿ, ವೈನಿ, ಗರ್ದಿ, ಜರಾ, ಹರಾಖತ್, ಬಾತ್ಮಿ, ರಗಡ್, ಡೋಣಿ, ಕಛೇರಿ ಈ ಮೊದಲಾದ ಮರಾಠಿ ಶಬ್ಧಗಳು ಕನ್ನಡಕ್ಕೆ ಸೇರ್ಪಡೆಯಾಗಿದೆ. ಕರ್ನಾಟಕ ಮತ್ತು ಆಂಧ್ರಪ್ರದೇಶದ ಗಡಿಭಾಗಗಳಲ್ಲಿ ತೆಲಗು ಭಾಷೆಯ

ಪ್ರಭಾವವನ್ನು ಕಾಣಬಹುದು. ಬೀದರ್, ಕಲ್ಬುರ್ಗಿ, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ಕೋಲಾರ ಬೆಂಗಳೂರಿನ ಕೆಲವು ತಾಲ್ಲೂಕುಗಳ ಕನ್ನಡದ ಮೇಲೆ ತೆಲುಗಿನ ಪ್ರಭಾವ ಸಾಮಾನ್ಯವಾಗಿದೆ. ಈ ಪ್ರದೇಶಗಳಲ್ಲಿ ತೆಲುಗು ಮಿಶ್ರಿತ ಕನ್ನಡ ಮಾತನಾಡುವುದು ಇಲ್ಲಿ ಸಾಮಾನ್ಯವಾಗಿದೆ. ಈ ಕನ್ನಡದಲ್ಲಿ ನೆಗಾಡಿಯಿಂದ(ನೆಗಡಿ ಆಗಿದೆ), ಎರ್ರಗಡ್ಡೆ (ಈರುಳ್ಳಿ), ಶೀಬಿ (ಬೆಕ್ಕು), ಡಬ್ಬು (ಹಣ), ನೀಳ್ಳು (ನೀರು), ರೊಕ್ಕ (ಹಣ), ಕಳ್ಳು (ಬೆರಣಿ), ದೊಂಗ (ಕಳ್ಳ) ಮೊದಲಾದ ತೆಲುಗು ಪದಗಳು ಬಳಕೆಯಲ್ಲಿವೆ. ಕರ್ನಾಟಕದ ತಮಿಳು ನಾಡಿನ ಗಡಿಭಾಗದಲ್ಲಿ ಬಳಕೆಯಲ್ಲಿರಲುವ ಕನ್ನಡ ತಮಿಳಿನಂತೆಯೇ ಉಚ್ಚಾರಗೊಳ್ಳುತ್ತದೆ. ಕಬ್ಬಿಣ>ಗಬ್ಬಿಣ, ಕೊಬ್ಬು>ಗೊಬ್ಬು, ಕಾಪಿ>ಗಾಪಿ, ತೋಳು>ತೋಲು, ಪಣ>ಹಣ ಇತ್ಯಾದಿ. ಹೀಗೆ ಕರ್ನಾಟಕದ ಗಡಿ ಭಾಗಗಳಲ್ಲಿ ಅನ್ಯ ಭಾಷೆಗಳ ಸಂಪರ್ಕದ ಪರಿಣಾಮವಾಗಿ ಉಪಭಾಷೆಗಳು ಉಂಟಾಗಿವೆ.

ಪ್ರಮಾಣ ಭಾಷೆಗೆ ಉಪಭಾಷೆಗಳು ಹತ್ತಿರವಾದಂತೆ ಭಾಷಾ ವೈವಿಧ್ಯತೆಗಳು ಕಡಿಮೆಯಾಗುತ್ತದೆ. ಪ್ರಮಾಣ ಭಾಷೆಗೆ ದೂರವಾದಂತೆ ಭಾಷಾ ಪ್ರಭೇದಗಳಲ್ಲಿನ ವೈವಿಧ್ಯತೆ ಹೆಚ್ಚುತ್ತದೆ. ಜನರು ಹೆಚ್ಚು ಶಿಕ್ಷಿತರಾದಂತೆ ಮತ್ತು ಜನರ ನಡುವೆ ಸಂಪರ್ಕ ಇಂದು ಸುಲಭ ಸಾಧ್ಯವಾಗಿರುವುದರಿಂದ ಭಾಷಾ ಪ್ರಭೇದಗಳು ಕಡಿಮೆಯಾಗುತ್ತದೆ. ಇದರಿಂದಾಗಿ ಉಪಭಾಷೆಗಳ ಸಂಖ್ಯೆಯೂ ಕಡಿಮೆಯಾಗುತ್ತದೆ. ಅಗತ್ಯಕ್ಕೆ ತಕ್ಕಂತೆ ಹಲವು ಭಾಷೆಗಳನ್ನು ಕಲಿಯುತ್ತಿರುವುದರಿಂದ ಉಪಭಾಷೆಯೊಂದು ಎಲ್ಲಾ ಕಾಲಕ್ಕೂ ಉಪಭಾಷೆಯಾಗಿಯೇ ಉಳಿದಿರಲು ಸಾಧ್ಯವಿಲ್ಲ.

ಕೊನೆಯದಾಗಿ ಉಪಭಾಷೆ ಉಂಟಾಗಲು ಕಾರಣಗಳನ್ನು ಮ್ಯಾಕ್ ಡೇವಿಡ್ ಏಳು ರೀತಿಯಾಗಿ ವಿವರಿಸುತ್ತಾನೆ.

1. ಒಂದು ಪ್ರದೇಶದ ಜನರು ಮತ್ತೊಂದು ಪ್ರದೇಶಕ್ಕೆ ಕಾರಣಾಂತರದಿಂದ ಬಂದಾಗ ಮೊದಲಿದ್ದ ಜನರಲ್ಲಿಯ ಪರಿಣಾಮಕಾರಿ ಅಂಶಗಳು, ಹೊಸ ಭಾಷೆಯ ಉಚ್ಚಾರ, ವ್ಯಾಕರಣ ಶಬ್ದಕೋಶಗಳ ಮೇಲೆ ಪರಿಣಾಮ ಬೀರಬಹುದು.
2. ಒಂದು ಪ್ರದೇಶದ ಜನರು ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುವಾಗ ಮಾರ್ಗದಲ್ಲಿ ತಮ್ಮ ಭಾಷೆಯನ್ನು ಹರಡಬಹುದು.

3. ಒಂದು ಪ್ರದೇಶದಲ್ಲಿ ಧಾರ್ಮಿಕವಾಗಿ, ರಾಜಕೀಯವಾಗಿ ಇರುವ ಸೀಮೆಗಳು ಭಾಷಾ ವ್ಯತ್ಯಾಸಕ್ಕೆ ಕಾರಣವಾಗುತ್ತದೆ.

4. ಭೂ ಪರಿಸರಗಳು, ನದಿ, ಪರ್ವತ, ಗೊಂಡಾರಣ್ಯ, ಮರುಭೂಮಿ ಮುಂತಾದವು ಜನಸಂಪರ್ಕ ತಪ್ಪಿಸಿ ಭಾಷಾ ವ್ಯತ್ಯಾಸಕ್ಕೆ ಕಾರವಾಗುತ್ತದೆ.

5. ಯಾವುದಾದರೊಂದು ಪ್ರದೇಶ ಸಾಂಸ್ಕೃತಿಕ ಕೇಂದ್ರವಾಗಿದ್ದಲ್ಲಿ ಅಲ್ಲಿಯ ಭಾಷೆ ಅದಕ್ಕೂ ಕಡಿಮೆ ಪ್ರತಿಷ್ಟೆ ಹೊಂದಿದ ಉಪಭಾಷೆಗಳ ಮೇಲೆ ತನ್ನ ಪ್ರಭಾವವನ್ನು ಬೀರುತ್ತದೆ.

6. ಒಂದು ಉಪಭಾಷೆ ಅದನ್ನು ಬಳಸುವ ಜನರ ಸಾಮಾಜಿಕ ರಚನೆಯನ್ನು ಪ್ರತಿಬಿಂಬಿಸುತ್ತದೆ.

7. ಕೆಲವೊಮ್ಮೆ ವಲಸೆಗಾರರ ಭಾಷೆಯು ಸ್ಥಳೀಯ ಭಾಷೆ ಮೇಲೆ ತಮ್ಮ ಪ್ರಭಾವ ಬೀರವುದರಿಂದ ಬಾಷಾ ವ್ಯತ್ಯಾಸಕ್ಕೆ ಕಾರಣವಾಗುತ್ತದೆ.

ಈ ಮೇಲಿನ ಕಾರಣಗಳು ಉಪಭಾಷೆ ಉಂಟಾಗಲು ಕಾರಣಗಳೇನು ಎಂಬುದನ್ನು ಸ್ಥೂಲವಾಗಿ ವಿವರಿಸುತ್ತದೆ. ಇವಿಷ್ಟು ಕಾರಣಗಳೇ ಅಂತಿಮವಲ್ಲ. ಪರಿಸ್ಥಿತಿ, ಕಾಲ, ದೇಶಗಳಿಗೆ ಸಂಬಂಧಿಸಿದ ಹೊಸ ಹೊಸ ಕಾರಣಗಳಿಂದಾಗಿ ಉಪಭಾಷೆಗಳು ಉಂಟಾಗಬಹುದು.

ಅಧ್ಯಾಯ 4

# ಕನ್ನಡದ ಉಪಭಾಷೆಗಳು

ಮಾನವನ ಜೀವನಕ್ಕೆ ವಿಕಾಸವಿರುವಂತೆ ಆತನದೇ ಸೃಷ್ಟಿಯಾದ ಭಾಷೆಗೂ ವಿಕಾಸವಿದೆ. ಭಾಷೆ ಹುಟ್ಟಿನಿಂದ ಇಲ್ಲಿವರೆಗೂ ಒಂದೇ ರೂಪದಲ್ಲಿ ಉಳಿದುಕೊಂಡಿಲ್ಲ. ಒಂದು ಭಾಷೆಗೆ ಐತಿಹಾಸಿಕವಾಗಿ, ಸಾಮಾಜಿಕವಾಗಿ, ಭೌಗೋಳಿಕವಾಗಿ ಹಲವಾರು ಭಾಷಾ ರೂಪಗಳು ಗೋಚರಿಸುತ್ತವೆ. ಒಂದು ಭಾಷೆಯ ಈ ಭಾಷಾ ರೂಪಗಳನ್ನೇ ಉಫಭಾಷೆಗಳು ಎಂದು ಕರೆಯಲಾಗುತ್ತದೆ. ಒಂದು ನಿರ್ದಿಷ್ಟ ಕಾಲದಲ್ಲಿ ಸೀಮಿತವಾದ ಗಡಿರೇಖೆಗಳಲ್ಲಿ ಉಚ್ಚಾರಾತ್ಮಕ ವ್ಯತ್ಯಾಸಗಳು, ಧ್ವನಿ, ಆಕೃತಿಮಾ, ಧ್ವನಿಮಾ, ವಾಕ್ಯರಚನೆಯಲ್ಲಿ ವ್ಯತ್ಯಾಸಗಳನ್ನು ಹೊಂದಿದ್ದು ಯಾವುದೇ ಭಾಷಾ ಗುಂಪಿನಲ್ಲಿ ಸಂವಹನ ಸಾಧನವಾಗಿ ಸ್ವಾಭಾವಿಕವಾಗಿ ಬಳಕೆಯಾಗುತ್ತಿರವ ಮಾತಿನ ಒಂದು ಪ್ರಕಾರವೇ ಉಪಭಾಷೆ. ಕನ್ನಡ ಭಾಷೆ ಮೈಸೂರು ಕನ್ನಡ, ಧಾರವಾಡ ಕನ್ನಡ, ಕರಾವಳಿ ಕನ್ನಡ, ಗುಲ್ಬರ್ಗಾ ಕನ್ನಡ ಮೊದಲಾದ ಪ್ರಾದೇಶಿಕ ಭಾಷಾ ರೂಪಗಳನ್ನು ಹೊಂದಿದೆ. ಈ ಭಾಷಾ ರೂಪಗಳಲ್ಲಿ ಧ್ವನಿ, ಧ್ವನಿಮಾ, ಆಕೃತಿಮಾ, ವಾಕ್ಯರಚನೆ, ಉಚ್ಚಾರಣೆಯಲ್ಲಿ ವ್ಯತ್ಯಾಸವಿರುವುದನ್ನು ಗುರುತಿಸಬಹುದು. ಇವುಗಳೇ ಅಲ್ಲದೆ ಕನ್ನಡದಲ್ಲಿ ಐತಿಹಾಸಿಕವಾಗಿ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬ ಕಾಲಿಕ ಭಾಷಾ ರೂಪಗಳು ಮತ್ತು ಹವ್ಯಕ ಕನ್ನಡ, ಕುರುಬ ಕನ್ನಡ, ಹಾಲಕ್ಕಿ ಕನ್ನಡ, ಬಡಗ ಕನ್ನಡ ಮೊದಲಾದ ಜನಸಮುದಾಯಗಳ ಸಾಮಾಜಿಕ ಭಾಷಾ ರೂಪಗಳು ಉಪಭಾಷೆಗಳಾಗಿವೆ.

ಭಾಷಾ ವಿಜ್ಞಾನದಲ್ಲಿ ಆಡುಮಾತಿನ ಅಧ್ಯಯನಕ್ಕೆ ದೊರೆತ ಮನ್ನಣೆಯೆ ಉಪಭಾಷಾ ಅಧ್ಯಯನಕ್ಕೆ ನಾಂದಿಯಾಯಿತು. ಬರಹದ ಭಾಷೆಯ ಉಗಮ ವಿಕಾಸಕ್ಕೆ ಕಾರಣವಾದ ಆಡುಮಾತಿನ ಅಧ್ಯಯನವು ಭಾಷೆಯೊಂದರ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಜನ ಜೀವನದ ವೈಶಿಷ್ಟ್ಯಗಳನ್ನು ಗುರಿತಿಸಿಕೊಳ್ಳುವುದಕ್ಕೆ ಸಾಧ್ಯವಾಯಿತು. ಕನ್ನಡ ಭಾಷೆಯ ಪ್ರಾದೇಶಿಕ, ಸಾಮಾಜಿಕ, ಕಾಲಿಕ ಭಾಷಾ ರೂಪಗಳ ಅಧ್ಯಯನದಿಂದ ಕನ್ನಡ ಭಾಷೆಗೆ ಇರುವ ಬಹು ಉಪಭಾಷೆಗಳನ್ನು ಗುರುತಿಸಿಕೊಳ್ಳುವುದಕ್ಕೆ ಸಾಧ್ಯವಾಯಿತು.

ಭಾಷೆಯ ಉಗಮದೊಂದಿಗೆ ಭಾಷಾ ಪ್ರಭೇದಗಳೂ ರೂಪುಗೊಳ್ಳುತ್ತವೆ. ಅಂತೆಯೇ ಕನ್ನಡ ಭಾಷೆಯ ಉಗಮದೊಂದಿಗೆ ಹಲವು ಭಾಷಾ ಪ್ರಭೇದಗಳು ಇರುವುದನ್ನು ಶಾಸನಗಳು, ಪ್ರಾಚೀನ ಕವಿ ಕೃತಿಗಳಿಂದ ತಿಳಿಯಬಹುದಾಗಿದೆ. ಕ್ರಿ. ಶ. 850ಕ್ಕೆ ಸೇರಿದ ಕವಿರಾಜಮಾರ್ಗ

ಕೃತಿಯಲ್ಲಿ ಮಾರ್ಗಕಾರ ಕನ್ನಡ ನಾಡಿನ ಗಡಿಯನ್ನು ಕಾವೇರಿಯಿಂದ ಗೋದಾವರಿವರಿಯವರೆಗೆ ಗುರುತಿಸುತ್ತಾನೆ. 'ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್' ಎಂಬ ಮಾತು ಪಾದೇಶಿಕವಾಗಿ ಬಹುವಿಸ್ತಾರವಾದ ಕನ್ನಡ ನಾಡಿನಲ್ಲಿ ಹಲವು ಭಾಷಿಕ ರೂಪಗಳಿರುವುದನ್ನು ಸ್ಪಷ್ಟಪಡಿಸುತ್ತದೆ. ಕನ್ನಡದ ಉಪಭಾಷೆಗಳನ್ನು ಗುರುತಿಸುವ ಮೊದಲು ಕನ್ನಡ ನಾಡು ನುಡಿ ಮತ್ತು ಜನಾಂಗದ ಪ್ರಾಚೀನತೆಯನ್ನು ತಿಳಿದುಕೊಳ್ಳಬೇಕಾಗುತ್ತದೆ. ಕನ್ನಡ ಶಬ್ದ ನಿಷ್ಪತ್ತಿಯ ಬಗೆಗೆ ವಿದ್ವಾಂಸರಲ್ಲಿ ಏಕಾಭಿಪ್ರಾಯವಿಲ್ಲ. ಕಮ್ಮಿತ್ತು ನಾಡು, ಕರುನಾಡು, ಕರುನಾಟು, ಮೊದಲಾದ ನಿಶ್ಪತ್ತಿಯನ್ನು ಹೇಳುತ್ತಾರಾದರೂ ಯಾವುದೂ ಅಂತಿಮವಾಗಿ ಸ್ಪಷ್ಟವಾಗಿಲ್ಲ. ಪ್ರಾಚೀನ ಶಾಸನ ಮತ್ತು ಕೃತಿಗಳಲ್ಲಿ ಕನ್ನಡ ನಾಡನ್ನು ಕರ್ನಾಟ, ಕರ್ಣಾಟ ಎಂದು ಕರೆಯಲಾಗುತಿತ್ತು ಎಂಬುದಕ್ಕೆ ಹಲವು ಆಧಾರಗಳಿವೆ. ಸಂಸ್ಕೃತದ ಮೃಚ್ಚಕಟಿಕ ಕೃತಿಯಲ್ಲಿ ಕರ್ಣಾಟ ಎಂದೂ, ಮಹಾಭಾರತದ ಸಭಾಪರ್ವ ಮತ್ತು ಭೀಷ್ಮಪರ್ವಗಳಲ್ಲಿ ಕರ್ನಾಟಕ ಎಂದೂ, ರಾಜಶೇಖರನ ಕಾವ್ಯಮೀಮಾಂಸೆಯಲ್ಲಿ ಕರ್ಣಾಟೆ, ಕರ್ಣಾಟ ಎಂಬ ಉಲ್ಲೇಖಗಳಿವೆ. ಆರನೇ ಶತಮಾನಕ್ಕೆ ಸೇರಿದ ವರಾಹಮಿಹಿರನ ಬೃಹತ್ ಸಂಹಿತೆಯಲ್ಲಿ, ವಿಷ್ಣುಧರ್ಮೋತ್ತರ ಪುರಾಣದಲ್ಲಿ, ಮಾರ್ಕಂಡೇಯ ಪುರಾಣದಲ್ಲಿ ಕರ್ಣಾಟಕ, ಕರ್ಣಾಟೆ, ಕರ್ಣಾಟ ಎಂಬುದಾಗಿ ಬಳಕೆಗೊಂಡಿದೆ. ಆದಿಪುರಾಣ, ಪಂಪಭಾರತ, ಕವಿರಾಜಮಾರ್ಗ, ಶಬ್ದಮಣಿದರ್ಪಣ, ಶಬ್ದಾನುಶಾಸನ, ಛಂದೋಂಬುಧಿ ಮೊದಲಾದ ಕೃತಿಗಳಲ್ಲಿ ಕರ್ಣಾಟಕ ದೇಶ ಸೂಚಕವಾಗಿಯೂ, ಭಾಷಾ ಸೂಚಕವಾಗಿಯೂ ಬಳಕೆಯಾಗಿರುವುದನ್ನು ನೋಡಬಹುದು.

ಕ್ರಿಪೂ. ಸಮಾರು 450 ಕ್ಕೆ ಸೇರಿದ ತೊಲ್ಕಾಪ್ಪಿಯಂ ತಮಿಳು ಗ್ರಂಥದಲ್ಲಿ ತಮಿಳುನಾಡಿನ ಸುತ್ತಲಿನಲ್ಲಿ ಇದ್ದ ಹನ್ನೆರಡು ರಾಷ್ಟ್ರಗಳಲ್ಲಿ 'ಕನ್ನಡಮ್' ಕೂಡ ಒಂದು. (ಕೆ. ಕೆಂಪೇಗೌಡ, ಪು–141) ಪಾಂಡ್ಯ ರಾಜ ಶೆಡೆಯನ್ ಪರಾಂತಕನ ವೇಳ್ವಿಕುಡಿ ಎಂಬ ತಮಿಳು ತಾಮ್ರಶಾಸನದಲ್ಲಿ 'ಕರುನಾಡುಗನ್' ಎಂಬ ಪದ ಪ್ರಯೋಗವಿದೆ. ಹನ್ನೆರಡನೆ ಶತಮಾನಕ್ಕೆ ಸೇರಿದ ವೀರಸುಳಿಯಂ ತಮಿಳು ವ್ಯಾಕರಣ ಗ್ರಂಥದಲ್ಲಿ 'ಕನ್ನಡರ್' ಎಂಬ ಪದ ಬಳಸಿದೆ. ಅಲ್ಲದೆ ಕರ್ನಾಡು ಎಂಬ ಪದ ತಮಿಳಿನ ಉಚ್ಚಾರಣೆಯಲ್ಲಿ ಕರುನಾಡು ಎಂದಾಗಿದೆ. ಮೇಲಿನ ಉಲ್ಲೇಖಗಳಲ್ಲಿ ಕರುನಾಡು ಎಂಬುದು ಪ್ರದೇಶ ಸೂಚಕವಾಗಿ ಬಳಕೆಯಾಗಿರುವುದರಿಂದ ಕರುನಾಡು ಪ್ರದೇಶದ ಭಾಷೆ ಕನ್ನಡವೇ ಆಗಿದ್ದಿತು ಎಂಬುದರಲ್ಲಿ ಸಂಶಯವಿಲ್ಲ. ಕನ್ನಡ ಎಂಬುದು ಭಾಷಾ ಸೂಚಕವಾಗಿಯೂ ಹಲವು ಕನ್ನಡ ಕವಿ ಕೃತಿಗಳಲ್ಲಿ ಬಳಕೆಯಾಗಿದೆ. ಕವಿರಾಜಮಾರ್ಗದಲ್ಲಿ "ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್"

ಎಂಬ ಉಲ್ಲೇಖ, ಆಂಡಯ್ಯ ಕಬ್ಬಿಗರ ಕಾವದಲ್ಲಿ "ಕನ್ನಡಮೆನಿಪ್ಪ ನಾಡು ಚೆಲ್ವಾಯ್ತು" ಎಂದು ಮತ್ತು ಕರ್ಣಾಟಕ ನಿಘಂಟಿನಲ್ಲಿ "ಕನ್ನಡಮೆ ಕರ್ಣಾಟಕ ನಾಮಂ" ಎಂದೂ, ಮೋಹನ ತರಂಗಿಣಿಯಲ್ಲಿ "ಕನ್ನಡ ವಂಗ ಚೌಟ ಮಲೆಯಾಳ ದೇಶಂಗಳೊಪ್ಪಿದವು" ಎಂದೂ, ಕಂಠೀರವ ನರಸರಾಜ ವಿಜಯದಲ್ಲಿ "ತುರುಕ ಪಡೆ ನಡೆದುದು ಕನ್ನಡಕೆ" ಎಂದೂ ಮತ್ತು ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಗಮಕ ಸಮಾಸ ಆದಿಯಾದ ಹತ್ತು ಕನ್ನಡ ಭಾಷೆಗೆ ಸಂಬಂಧಿಸಿದ ಅಸಾಧಾರಣ ಲಕ್ಷಣಗಳನ್ನು ಗುರುತಿಸಿರುವುದು ಕನ್ನಡ ಎಂಬುದು ಭಾಷೆ, ದೇಶ, ಸಂಸ್ಕೃತಿ ಸೂಚಕವಾಗಿಯೂ ಬಳಕೆಯಾಗುಯತ್ತಿತ್ತು ಎಂಬುದು ಸ್ಪಷ್ಟವಾಗಿದೆ.

ಕನ್ನಡ, ತಮಿಳು, ಮಲೆಯಾಳ ಮೊದಲಾದವು ದ್ರಾವಿಡ ಭಾಷೆಯ ಉಪಭಾಷೆಗಳಾಗಿವೆ. ಈ ಮೇಲಿನ ಭಾಷೆಗಳೆಲ್ಲಾ ಮೂಲದ್ರಾವಿಡ ಭಾಷೆಯೊಂದಕ್ಕೆ ಸೇರಿದ್ದು ಕಾಲಾನಂತರದಲ್ಲಿ ಅದರಿಂದ ಬೇರ್ಪಟ್ಟು ಸ್ವತಂತ್ರ ಭಾಷೆಗಳಾದವು. ಕನ್ನಡ ಕ್ರಿ. ಪೂ. ಸುಮಾರು 2500 ವರ್ಷಗಳ ಹಿಂದೆಯೇ ದ್ರಾವಿಡ ಭಾಷೆಯಿಂದ ಬೇರೆಯಾದ ಕನ್ನಡ ಆಡುಮಾತಿನ ಸ್ವರೂಪದಿಂದ ಬರಹದ ಸ್ವರೂಪಕ್ಕೆ ಸುಮಾರು ನಾಲ್ಕನೇ ಶತಮಾನದ ವೇಳೆಗೆ ತಿರುಗಿತು. ಕನ್ನಡದ ಮೊದಲ ಶಾಸನ ಕ್ರಿ. ಪೂ. 450 ರಲ್ಲಿ ದೊರೆತ ಹಲ್ಮಿಡಿ ಶಾಸನ ಮತ್ತು ಕ್ರಿ.ಪೂ. 850 ರಲ್ಲಿ ಕವಿರಾಜಮಾರ್ಗ ಲಕ್ಷಣಗ್ರಂಥದಲ್ಲಿ ಮಾರ್ಗಕಾರ ಹೇಳುವ 'ಪೂರ್ವಾಚಾರ್ಯರ್' ಎಂಬ ಮಾತು ಐದನೇ ಶತಮಾನದ ವೇಳೆಗೆ ಕನ್ನಡ ಸಾಹಿತ್ಯ ಭಾಷೆಯಾಗುವಷ್ಟರ ಮಟ್ಟಿಗೆ ಪ್ರಬುದ್ಧತೆಯನ್ನು ಪಡೆದು ಕೊಂಡಿತ್ತು ಎಂಬುದನ್ನು ಸಾಬೀತು ಪಡಿಸುತ್ತದೆ. ಇದರಿಂದಾಗಿ ಕನ್ನಡ ಆಡುಭಾಷೆಯ ಪ್ರಾಚೀನತೆಯನ್ನು ಒಂದನೇ ಶತಮಾನಕ್ಕೂ ಹಿಂದಕ್ಕೆ ಕೊಂಡಯ್ಯಬಹುದು.

ಕ್ರಿ. ಶ ಎರಡನೇ ಶತಮಾನಕ್ಕೆ ಸೇರಿದ ಗ್ರೀಕ್ ಪ್ರಹಸನದಲ್ಲಿ ಕನ್ನಡದ ಶಬ್ದಗಳಿವೆ. ಕ್ರಿ. ಶ. ಒಂದನೆಯ ಶತಮಾನದ ಪೂರ್ವದಲ್ಲಿದ್ದ ಹಾಲ ರಾಜನ 'ಗಾಥಸತ್ತಸಈ' ಎಂಬ ಪ್ರಾಕೃತ ಭಾಷೆಯ ಪದ್ಯ ಸಂಕಲನದಲ್ಲಿ ತುಪ್ಪ, ಪೊಟ್ಟ, ತೀರ ಎಂಬ ಶಬ್ದಗಳಿದ್ದು ಇವಗಳು ವಿದ್ವಾಂಸರು ಕನ್ನಡದ ಶಬ್ದಗಳು ಎಂದು ಅಭಿಪ್ರಾಯಪಡುತ್ತಾರೆ. ಸುಮಾರು ಕ್ರಿ. ಶ. 150ಕ್ಕೆ ಸೇರಿದ ಈಜಿಪ್ಟಿನ ಟಾಲೆಮಿ ಎಂಬ ಭೂಗೋಳಶಾಸ್ತ್ರಜ್ಞನು ತನ್ನ ಕೃತಿಯಲ್ಲಿ ನಾಗನೂರು, ಇಂಡಿ, ಇಂಗಲಜಿ, ಹೂವಿನ ಹಿಪ್ಪರಗಿ, ಸವಡಿ, ಕಲಕೇರಿ, ಒಮ್ಮೆಲಗಿ, ಮುದ್ಗಲ, ಹತ್ತೀರ್ಕಿ ಎಂಬ ಕನ್ನಡದ ಊರುಗಳ ಹೆಸರುಗಳನ್ನು ಗುರುತಿಸುತ್ತಾನೆ. ಈ ಆಧಾರಗಳಿಂದ ಕನ್ನಡ ಭಾಷೆ ಕ್ರಿ. ಶ.ದ ಆರಂಭದ ವೇಳೆಗೆ ಆಡುಮಾತಿನಲ್ಲಿ ಇದ್ದಿತು. ನಂತರದಲ್ಲಿ ವಿಕಾಸವಾಗಿ ಕ್ರಿ

ಶ. ಎರಡು ಮತ್ತು ಮೂರನೆಯ ಶತಮಾನದ ವೇಳೆಗೆ ಗ್ರಾಂಥಿಕ ಸ್ವರೂಪವನ್ನು ಪಡೆಯಿತು ಎನ್ನಬಹುದು.

ಸುದೀರ್ಘ ಇತಿಹಾಸವನ್ನು ಪ್ರಾಚೀನತೆಯನ್ನು ಹೊದಿರುವ ಕನ್ನಡ ಭಾಷೆಗೆ ಹಲವು ಉಪಭಾಷೆಗಳು ಇದ್ದಿರುವುದು ಸಹಜವಾಗಿದೆ. ಪ್ರಾಚೀನ ಕನ್ನಡದಲ್ಲಿ ಹಲವು ಭಾಷಾ ರೂಪಗಳಿದ್ದವು ಎಂಬುದನ್ನು ಕವಿರಾಜಮಾರ್ಗಕಾರನ ಈ ಪದ್ಯ ಸ್ಪಷ್ಟಪಡಿಸುತ್ತದೆ.

ದೋಷಮಿನಿತೆಂದು ಬಗೆದು
ದ್ಭಾಷಿಸಿ ತರಿಸಂದು ಕನ್ನಡಂಗಳೊಳೆಂದುಂ
ಮಿಸುಗಿಯುಮರೆಯಲಾರದೆ
ಬೇಸರಗುಂ ದೇಶಿ ಬೇರೆರಪ್ಪುದರಃ

ಕವಿರಾಜಮಾರ್ಗಕಾರ ಹೇಳುವ 'ಕನ್ನಡಂಗಳು' ಕನ್ನಡ ಭಾಷೆ ಒಂದೇ ರೀತಿಯಾಗಿ ಪ್ರಯೋಗವಾಗುತ್ತಿರಲಿಲ್ಲ ಎಂಬುದನ್ನು ಹೇಳುತ್ತದೆ. ಕನ್ನಡದ ಈ ಭಾಷಾ ರೂಪಗಳೇ ಕನ್ನಡದ ಉಪಭಾಷೆಯಾಗಿದ್ದಿರಬೇಕು. ಕೆಲವು ವಿದ್ವಾಂಸರು ಕವಿರಾಜಮಾರ್ಗಕಾರ ಹೇಳುವ ದಕ್ಷಿಣೋತ್ತರ ಮಾರ್ಗಗಳು ಕನ್ನಡದ ಉಪಭಾಷೆಗೆ ಅನ್ವಯಿಸುತ್ತದೆ ಎಂದಿದ್ದಾರೆ. "ಕವಿರಾಜಮಾರ್ಗದಲ್ಲಿ ಸಂಸ್ಕೃತದಲ್ಲಿ ಉತ್ತರ ಮಾರ್ಗ ಮತ್ತು ದಕ್ಷಿಣ ಮಾರ್ಗಗಳೆಂಬ ಎರಡು ಪ್ರಭೇದಗಳಿವೆ ಎಂಬುದಾಗಿ ಕಾವ್ಯಾದರ್ಶದಲ್ಲಿ ದಂಡಿ ಹೇಳಿರುವ ಹಾಗೆಯೇ ಕನ್ನಡಕ್ಕೂ ಅಳವಡಿಸುವುದರ ಮೂಲಕ ಈ ವಿಭಜನೆಯನ್ನು ಸಿದ್ಧಪಡಿಸಿದ ಹಾಗೆ ಕಾಣುತ್ತದೆ."(ಡಿ.ಎನ್. ಶಂಕರ ಭಟ್ಟ ಪು–109) ಏನೆ ಇದ್ದರೂ ಒಂಭತ್ತನೇ ಶತಮಾನದ ಹೊತ್ತಿಗೆ ಕನ್ನಡದ ಹಲವು ಭಾಷಾ ರೂಪಗಳಿದ್ದವು. ಅವು ಆಡುಮಾತಿನಲ್ಲಿ ವ್ಯಾಪಕವಾಗಿದ್ದವು. ಆದರೆ ಇವಕ್ಕೆ ಸಾಹಿತ್ಯಿಕ ದಾಖಲೆಗಳು ಇರಲಿಲ್ಲ. ಕವಿಗಳು, ಶಾಸನಕಾರರು ಪಂಡಿತಮಾನ್ಯವಾದ ಭಾಷೆಯನ್ನು ಉದ್ದೇಶ ಪೂರ್ವಕವಾಗಿ ಸಾಹಿತ್ಯ ರಚನೆಯಲ್ಲಿ ಬಳಸಿಕೊಂಡಿದ್ದರು. ಅಂದು ಸಂಸ್ಕೃತ ಭೂಯಿಷ್ಠವಾದ ತಿರುಳುಗನ್ನಡ ಶಿಷ್ಟ ಭಾಷೆಯಾಗಿ ಪ್ರಚಲಿತದಲ್ಲಿತ್ತು.

ಅದರೊಳಗಂ ಕಿಸುವೊಳಲಾ
ವಿದಿತ ಮಹಾಕೋಪಣ ನಗರದಾ ಪುಲಿಗೆರೆ ಯಾ
ಸದಭಿಸ್ತುಮಪ್ಪೊಂಕುಂ
ದದ ನಡುವಣ ನಾಡೆ ಕನ್ನಡದ ತಿರುಳ್

ಕವಿರಾಜಮಾರ್ಗಕಾರನ ಈ ಮಾತು ಪಟ್ಟದಕಲ್ಲು, ಕೊಪ್ಪಳ, ಪುಲಿಗೆರೆ, ಒಕ್ಕುಂದದ ನಡುವೆ ಬಳಕೆಯಲ್ಲಿದ್ದ ತಿರುಳ ಕನ್ನಡ ಶಿಷ್ಟಭಾಷೆಯ ಸ್ವರೂಪವನ್ನು ಪಡೆದಿತ್ತು ಎಂಬುದಾಗಿ ಹೇಳತ್ತದೆ. ಅಲ್ಲದೆ ಪಂಪನು ಪುಲಿಗೆರೆಯ ತಿರುಳ ಕನ್ನಡವನ್ನು ಕಾವ್ಯ ಭಾಷೆಯಾಗಿ ಬಳಸಿಕೊಂಡಿದ್ದೇನೆ ಎನ್ನುತ್ತಾನೆ.

ರಾಜಾದ್ರಾಜಕಮೆನಿಸಿದ
ಸಾಜದ ಪುಲಿಗೆರೆಯ ತಿರುಳ ಕನ್ನಡದೊಳ್ ನಿ
ರ್ವ್ಯಾಜದೆಸಕದೊಳ್ ಪುದಿದೊಂ
ದೋಜೆಯ ಬಲದಿನಿಯ ಕವಿತೆ ಪಂಪನ ಕವಿತೇ.

ಹೀಗೆ ಕನ್ನಡ ಪ್ರಾಚೀನ ಕವಿಗಳು ತಿರುಳ ಗನ್ನಡವೆಂಬ ಶಿಷ್ಟಭಾಷೆಯಲ್ಲಿ ಸಾಹಿತ್ಯ ಕೃತಿಗಳನ್ನು, ಶಾಸನಗಳನ್ನು ರಚಿಸಿದರೂ ಆಡುಮಾತಿನ ವೈಶಿಷ್ಟ್ಯಗಳನ್ನು ಸಾಹಿತ್ಯ ಕೃತಿಗಳಲ್ಲಿ ತರದೆ ಇರಲು ಸಾಧ್ಯವಾಗಲಿಲ್ಲ. ಇದನ್ನು 'ದೇಸಿ' ಎಂಬ ಹೆಸರಿನಲ್ಲಿ ಬಳಸಿಕೊಂಡರು. ಕನ್ನಡ ಭಾಷೆಯ ವಿಶಿಷ್ಟ ರೂಪಗಳು 'ದೇಸಿ' ಪ್ರಕಾರದಲ್ಲಿ ಕೃತಿ, ಶಾಸನಗಳಲ್ಲಿ ದಾಖಲಾದವು.

ದೋಸಮನೆ ಗುಣದವೋಲು
ದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್
ದೇಸಿಯನೆ ನಿರಿಸಿ ಖಂಡ
ಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್
(ಕವಿರಾಜಮಾರ್ಗ)

ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್
ಪುಗುವುದು ಪೊಕ್ಕು ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧ ಮಾ
ಪ್ಪುಗುಮುವೆಳಮಾವು ಕೆಂದಳಿರ ಪೂವಿನ ಬಿಣ್ಪೊರೆಯಿಂದ ಬಳಲ್ದು ತುಂ
ಬಿಗಳನೆ ತುಂಬಿ ಕೋಗಿಲೆಯ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆ ವೋಲ್
(ಪಂಪ)

ಮೇಲಿನ ಕವಿಗಳು ಹೇಳುವಂತೆ 'ದೇಸಿ' ಕಾವ್ಯದ ಅಂಗ. ದೇಸಿ ಮತ್ತು ಮಾರ್ಗಗಳೆರಡು ಅಂದಿನ ಸಾಹಿತ್ಯ ಅಭಿವ್ಯಕ್ತಿಯ ಮಾಧ್ಯಮಗಳಾಗಿದ್ದವು. ಮಾರ್ಗದಲ್ಲಿ ಕೃತಿ ರಚನೆ ಮಾಡುತ್ತಿದ್ದ ಕನ್ನಡದ ಕವಿಗಳು ಈ ನೆಲದ ಭೌಗೋಳಿಕ ವೈಶಿಷ್ಟ್ಯವನ್ನು ಸೂಚಿಸಲು ದೇಸಿಯನ್ನು ಕಾವ್ಯದಲ್ಲಿ ಬಳಸಿದರು. ನಯಸೇನನ 'ನಾಣ್ನುಡಿ ದೇಸಿವೆತ್ತ ಪೊಸನುಡಿ' ಎಂಬ

ಮಾತು ಕನ್ನಡದ ಪ್ರಾದೇಶಿಕ ರೂಪಗಳನ್ನು ದೇಸಿ ಎಂಬ ಹೆಸರಿನಿಂದ ಗುರುತಿಸಲಾಗುತ್ತಿತ್ತು ಎಂಬುದನ್ನು ಹೇಳುತ್ತದೆ. ಹತ್ತನೇ ಶತಮಾನದ ನಂತರ ಹನ್ನೆರಡನೆ ಶತಮಾನದ ಹೊತ್ತಿಗೆ ಅನೇಕ ರಾಜಕೀಯ, ಸಾಮಾಜಿಕ ಪಲ್ಲಟಗಳಾದವು. ಸಾಹಿತ್ಯವು ಅರಮನೆಯಿಂದ ಜನಸಾಮಾನ್ಯರೆಡೆಗೆ ನಡೆಯಿತು. ಕವಿಗಳು ರಾಜಾಶ್ರಯವನ್ನು ನಿರಾಕರಿಸಿದರು. ಸಂಸ್ಕೃತ ಬಳಕೆಯನ್ನು ಬಲವಾಗಿ ಖಂಡಿಸಿದರು ಮತ್ತು ಅದನ್ನು ಬಳಸದಂತೆ ನಿರ್ಧಾರ ಪೂರ್ವಕವಾಗಿ ಸಾಹಿತ್ಯ ಕೃತಿ ರಚನೆಗೆ ಪ್ರಯತ್ನಿಸಿದರು. ಆಂಡಯ್ಯನ ಕಬ್ಬಿಗರ ಕಾವ ಇದಕ್ಕೆ ಉತ್ತಮ ನಿದರ್ಶನವಾಗಿದೆ. ಪ್ರಾಚೀನ ಕವಿಗಳು ಮಾರ್ಗದೊಡನೆ ದೇಸಿಯನ್ನು ಕಾವ್ಯದ ಸೌಂದರ್ಯಕ್ಕಾಗಿ ಮಾತ್ರ ಬಳಸುತ್ತಿದ್ದರು. ನಡುಗನ್ನಡದ ಕಾಲದಲ್ಲಿ ದೇಸಿಯನ್ನೇ ಕಾವ್ಯದ ಪ್ರಮುಖ ಮಾಧ್ಯಮವನ್ನಾಗಿ ಮಾಡಿಕೊಳ್ಳಲಾಯಿತು.

ಈ ಕಾಲದಲ್ಲಿ ಬಂದ ವ್ಯಾಕರಣಕಾರರು, ಅಲಂಕಾರಿಕರು ಮಾರ್ಗದಲ್ಲಿ ಕೃತಿ ರಚಿಸುವಾಗ ನಡುವೆ ಬರುವ ದೇಸಿಯನ್ನು ದೋಷಯುಕ್ತ ರಚನೆಯಾಗಿಯೇ ಪರಿಗಣಿಸಿದರು. ರುದ್ರಟನು ಪದ ದೋಷಗಳಲ್ಲಿ ದೇಶ್ಯವನ್ನು, ಗ್ರಾಮ್ಯದ ಜೊತೆ ದೋಷವಾಗಿ ಗುರುತಿಸುತ್ತಾನೆ. ಕೇಶಿರಾಜನು ಕೊರಲ್, ಬೆರಲ್, ಎರಲ್, ಮರಲ್, ನರಲ್, ಸರಲ್ ಮೊದಲಾದವನ್ನು ಗ್ರಾಮ್ಯರು ಳಾಂತವಾಗಿ ಇಂದು ಹೊಸಗನ್ನಡದಲ್ಲಿ ಉಚ್ಚರಿಸುವಂತೆ ಉಚ್ಚರಿಸುವುದು ದೋಷ ಎಂದಿದ್ದಾನೆ. ಇಂದಿಗೂ ಮೇಲಿನ ಪದಗಳು ಆಡುಮಾತಿನಲ್ಲಿ ಳಾಂತವಾಗಿಯೆ ಉಳಿದಿವೆ.

ನಡುಗನ್ನಡದಲ್ಲಿ ಸಾಮಾನ್ಯ ಜನರೂ ಸಾಹಿತ್ಯ ರಚನೆಯಲ್ಲಿ ಭಾಗಿಯಾದುದರಿಂದ ವಿವಿಧ ಜನ ಸಮುದಾಯಗಳ ಭಾಷಾ ರೂಪಗಳು ಸಾಹಿತ್ಯಕ ದಾಖಲೆಯನ್ನು ಪಡೆದವು. ಕನ್ನಡ ಭಾಷೆ ಕ್ಲಿಷ್ಟತೆಯನ್ನು ಕಳೆದುಕೊಂಡು ಸರಳತೆಯತ್ತ ನಡೆಯಿತು. ಜನರ ಆಡುಮಾತಿನಲ್ಲಾದ ಬದಲಾವಣೆಗಳು ಸಾಹಿತ್ಯ ಕೃತಿಯ ಮೇಲೆ ಪ್ರಭಾವ ಬೀರಿತು. ರಳ,ಕುಳ ಗಳು ಆಡುಮಾತಿನಿಂದ ಅಳಿದವು ಪರಿಣಾಮವಾಗಿ ಸಾಹಿತ್ಯ ಕೃತಿಯಲ್ಲೂ ಅವುಗಳ ಬಳಕೆ ಕಡಿಮೆಯಾಗತೊಡಗಿತು. ಹರಿಹರ ಉಚ್ಚಾರಣೆ ಮತ್ತು ಬರವಣಿಗೆಯಲ್ಲಿ ಬೇರೆ ಬೇರೆಯಾಗಿ ತೋರುವ ಈ ಅಕ್ಷರಗಳನ್ನು ಇನ್ನು ಮುಂದೆ ತಾನು ಬಳಸುವುದಿಲ್ಲ ಎನ್ನುತ್ತಾನೆ. ಸಾಹಿತ್ಯ ಜನಮುಖಿಯಾಗಿದ್ದರಿಂದ ದೇಸಿ ಛಂದಸ್ಸಿನಲ್ಲಿ ಬಹುಮುಖ ಪ್ರಯೋಗಗಳು ನಡೆದವು. ಈ ಹಿಂದೆ ವ್ಯಾಕರಣಕಾರರು, ಪಂಡಿತರು ಭಾಷೆಗೆ ಚೌಕಟ್ಟನ್ನು ಹಾಕುವ ವಿಫಲ ಪ್ರಯತ್ನವನ್ನು ಮಾಡಿದರು. ಮೊದಲು ಭಾಷೆ ಆಡುಮಾತಿನ ರೂಪದಲ್ಲಿರುತ್ತದೆ ನಂತರ ಅದಕ್ಕೆ ವ್ಯಾಕರಣ ರಚನೆಯಾಗುತ್ತದೆ. ಆಡುಮಾತಿನಲ್ಲಿ ವ್ಯಾಕರಣ ಹೀಗೆ ಇರಬೇಕು ಎಂಬ ನಿಯಮಗಳು ಎಲ್ಲ ಕಾಲದಲ್ಲೂ ಧೂಳಿಪಟವಾಗಿವೆ. ವ್ಯಾಕರಣವಿಲ್ಲದೆ ಭಾಷೆ

ಕ್ರಮಬದ್ಧವಾಗಿರಲಾರದು. ಆದರೂ ವ್ಯಾಕರಣದ ಅರಿವಿಲ್ಲದೆಯೂ ಆಡುಮಾತಿನಲ್ಲಿ ವ್ಯಾಕರಣ ನಿಯತವಾಗಿ ಬಳಕೆಯಾಗುತ್ತಿರುತ್ತದೆ.

ನಡುಗನ್ನಡದಲ್ಲಿ ಬದಲಾದ ಭಾಷಾ ಸ್ವರೂಪದ ಬಗ್ಗೆ ಶಾಸ್ತ್ರಕವಿಗಳು ಆತಂಕ ವ್ಯಕ್ತಪಡಿಸಿದರು. ಛಂದಸ್ಸಿನ ನಿಯಮಗಳನ್ನು ದಾಟಬಾರದು ಎಂದು ಭಾಷೆಗೆ ಚೌಕಟ್ಟನ್ನು ಹಾಕುವ ಪ್ರಯತ್ನ ಮಾಡಿದರು.

ಛಂದಮಿದಾವುದೆಂದೊಡಿರಿವರ್ ಪದಬಂಧಳೀ ಪ್ರಯೋಗಮಂ
ತೆಂದೊಡೆ ಬಯ್ವರಾವ ಕವಿಮಾರ್ಗಮಿದೆಂದೊಡೆ ಪೊಯ್ವರರ್ಥಮೇ
ನೆಂದೊಡೆ ಕೊಂಡು ಭಂಡುಗೆಡೆದು ಉಟ್ಟುದನಿಕ್ಕುವರ್ ಆವ ನೀತಿ ಪೇ
ಎಂದೊಡೆ ಕೊಲ್ವರ್ ಈಗಳಿನ ದೇಸಿಗೆ ಬೀಳ್ದ ಮಹಾಕವೀಶ್ವರರ್

(ಸೂಕ್ತಿ ಸುಧಾರ್ಣವ)

ಕನ್ನಡದ ಆಡುಮಾತಿನಲ್ಲಿ ಆಗುತ್ತಿದ್ದ ಬದಲಾವಣೆಗಳು ಸಾಹಿತ್ಯ ರಚನೆಯಲ್ಲೂ ಕಾಣಿಸಿಕೊಂಡವು ಅದನ್ನು ಪ್ರಶ್ನಿಸಹೊರಟ ಕವಿಗೆ ಮೇಲಿನಂತೆ ತೊಂದರೆಗಳು ಎದುರಾದವು.

"ಭೌಗೋಳಿಕ ಮಿತಿಗಳಲ್ಲಿ ಭಾಷೆಯಲ್ಲಿ ಹಲವು ವ್ಯತ್ಯಾಸಗಳನ್ನು ಕಾಣಬಹುದು. ಈ ವ್ಯತ್ಯಾಸಗಳನ್ನೆಲ್ಲಾ ಉಪಭಾಷೆಯಲ್ಲಿ ಅಳವಡಿಸಿಕೊಂಡರೆ ಆಗ 'ದೇಸಿ' ಕಲ್ಪನೆ ಕೂಡ ಈ ಉಪಭಾಷೆಯ ವ್ಯತ್ಯಾಸದೊಂದಿಗೆ ಬದಲಾಗುತ್ತಾ ಹೋಗಬೇಕಾಗುತ್ತದೆ."(ಕೆ. ವಿ ನಾರಾಯಣ ಪು–352) ಪ್ರಾಚೀನ ಕನ್ನಡದಿಂದ ಹೊಸಗನ್ನಡದವರೆಗೆ ಆದ ಬದಲಾವಣೆಗಳು ಕನ್ನಡದ ಐತಿಹಾಸಿಕ ಉಪಭಾಷೆಗಳಿಗೆ ಕಾರಣವಾಗಿದೆ. ಈ ಬದಲಾವಣೆಗಳು ಸಾಹಿತ್ಯ ಕೃತಿಗಳು, ಶಾಸನಗಳಲ್ಲಿ ದಾಖಲಾಗಿವೆ. ಹಳಗನ್ನಡದ ಶಾಸನಗಳಲ್ಲಿ ಕೆಡಿಸು, ಎದಿರ್, ಕೆಸು, ಪೆರಿಯ ಮೊದಲಾದ ಪದಗಳು ಅನಂತರದ ಶಾಸನಗಳಲ್ಲಿ ಕಿಡಿಸು, ಇದಿರ್, ಕಿಸು, ಪಿರಿಯ ಎಂದು ಬದಲಾಗಿವೆ. ಎಂಟು ಮತ್ತು ಒಂಭತ್ತನೇ ಶತಮಾನದಲ್ಲಿ ಎ ಕಾರ ಇ ಕಾರವಾಗಿ ಪರಿವರ್ತನೆಯಾಗಿರುವುದನ್ನು ಇಲ್ಲಿ ಗಮನಿಸಬಹುದು. ಹೀಗೆ ಭಾಷೆಯ ಬೇರೆ ಬೇರೆ ರೂಪಗಳು ಆಂಶಿಕವಾಗಿಯಾದರೂ ಬರಹದಲ್ಲಿ ದಾಖಲಾಗಿವೆ.

ಬದಲಾವಣೆ ಭಾಷೆಯ ಜೀವಂತ ಲಕ್ಷಣ. ಭಾಷೆ ಬೆಳೆಯುತ್ತಿರುವಾಗ ತನ್ನದೇ ಆದ ಉಪಭಾಷೆಗಳನ್ನು ಸಂಪಾದಿಸಿಕೊಳ್ಳುತ್ತದೆ ಮತ್ತು ಕಳೆದುಕೊಳ್ಳುತ್ತದೆ. ಆಧುನಿಕ ಕನ್ನಡ ಉಪಭಾಷೆಯು ಪ್ರಾದೇಶಿಕ ವೈಶಿಷ್ಯತೆಯನ್ನು ಆಧರಿಸಿ ಪ್ರಾದೇಶಿಕ ಉಪಭಾಷೆಗಳನ್ನು, ಸಮಾಜದ ಜನರ ಸಂಸ್ಕೃತಿ, ಜಾತಿ, ವರ್ಗ, ವೃತ್ತಿ ಮೊದಲಾದವುಗಳಲ್ಲಿ ಸಾಂಸ್ಕೃತಿಕ ವೈಶಿಷ್ಟ್ಯವನ್ನು, ಭಿನ್ನತೆಯನ್ನು ಆಧರಿಸಿ ಸಾಮಾಜಿಕ ಉಪಭಾಷೆಗಳನ್ನು ಹೊಂದಿದೆ.

ಗಡಿನಾಡಿನ ಉಪಭಾಷೆಗಳು, ಅನ್ಯ ಭಾಷಾ ಪ್ರಭಾವಿತ ಉಪಭಾಷೆಗಳೂ ಕನ್ನಡದಲ್ಲಿವೆ. ಈ ಉಪಭಾಷೆಗಳನ್ನು ಪ್ರಾದೇಶಿಕ ಉಪಭಾಷೆಗಲ್ಲಿಯೇ ವಿವರಿಸಿಕೊಳ್ಳಬಹುದಾಗಿದೆ.

ಕನ್ನಡದ ಉಪಭಾಷೆಗಳು ಕಾಲದಿಂದ ಕಾಲಕ್ಕೆ ಹೆಚ್ಚಾಗಬಹುದು ಇಲ್ಲವೆ ಕಡಿಮೆಯಾಗಬಹುದು. ಏಕೆಂದರೆ ಉಪಭಾಷೆಯ ಒಳಗೇ ಒಳ ಪ್ರಭೇದಗಳಿರುತ್ತವೆ. ಇವು ಕಾಲ ಕ್ರಮೇಣ ಉಪಭಾಷೆಗಳಾಗಿ ರೂಪುಗೊಳ್ಳಬಹುದು. ಕನ್ನಡದ ಪ್ರಾದೇಶಿಕ ಉಪಭಾಷೆಯಾದ ಮೈಸೂರು ಕನ್ನಡದಲ್ಲಿಯೇ ಹೆಗ್ಗಡೆದೇವನ ಕೋಟೆ ಕನ್ನಡ, ಹುಣಸೂರು ಕನ್ನಡ, ಕೆ.ಆರ್, ನಗರದ ಕನ್ನಡ ಮೊದಲಾದ ಒಳ ಪ್ರಭೇದಗಳಿವೆ. ಉಪಭಾಷೆಗಳು ಪ್ರಮಾಣ ಭಾಷೆಗೆ ಹತ್ತಿರವಾದಂತೆ ಉಪಭಾಷಾ ವೈಶಿಷ್ಟ್ಯಗಳು ಮರೆಯಾಗಬಹುದು. ಕನ್ನಡದ ಪ್ರಮಾಣ ಭಾಷೆಯಾದ ಬೆಂಗಳೂರು ಕನ್ನಡಕ್ಕೆ ಮೈಸೂರು ಕನ್ನಡ ಹತ್ತಿರವಿರುವುದರಿಂದ ಈ ಉಪಭಾಷೆಗಳ ನಡುವೆ ಹೆಚ್ಚಿನ ಭಿನ್ನತೆಯಿಲ್ಲ.

ಆಧುನಿಕ ಉಪಭಾಷೆಗಳನ್ನು ವಿದ್ವಾಂಸರು ವಿವಿಧ ರೀತಿಯಲ್ಲಿ ವರ್ಗೀಕರಿಸುತ್ತಾರೆ. ಕೆಂಪೇಗೌಡ ಅವರು ಕನ್ನಡದ ಉಪಭಾಷೆಗಳನ್ನು ಪ್ರಾಚೀನ ಕನ್ನಡದ ಉಪಭಾಷೆಗಳು, ಆಧುನಿಕ ಕನ್ನಡದ ಉಪಭಾಷೆಗಳು ಎಂದು ಎರಡು ರೀತಿಯಾಗಿ ವರ್ಗೀಕರಿಸುತ್ತಾರೆ. ಆಧುನಿಕ ಉಪಭಾಷೆಗಳನ್ನು ಪ್ರಾದೇಶಿಕ ಉಪಭಾಷೆಗಳು, ಸಾಮಾಜಿಕ ಉಪಭಾಷೆಗಳು ಎಂಬುದಾಗಿ ವಿಭಾಗಿಸಿದ್ದಾರೆ. ಪ್ರಾದೇಶಿಕ ಉಪಭಾಷೆಗಳಲ್ಲಿ ಒಳನಾಡ ಕನ್ನಡ, ಹೊರನಾಡ ಕನ್ನಡ, ಗಡಿನಾಡ ಕನ್ನಡ, ಕರಾವಳಿ ಕನ್ನಡ ಎಂಬ ಒಳ ವಿಭಾಗಗಳಿವೆ. ಡಿ. ಎನ್. ಶಂಕರ ಭಟ್ಟರವರು ಕನ್ನಡದ ಉಪಭಾಷೆಗಳನ್ನು ಚಾರಿತ್ರಿಕ ಉಪಭಾಷೆಗಳು, ಪ್ರಾದೇಶಿಕ ಉಪಭಾಷೆಗಳು, ಸಾಮಾಜಿಕ ಉಪಭಾಷೆಗಳು ಎಂಬುದಾಗಿ ಮೂರು ಭಾಗವಾಗಿ ವರ್ಗೀಕರಿಸುತ್ತಾರೆ. ಕನ್ನಡ ಭಾಷೆಯ ಚರಿತ್ರೆಯನ್ನಾಧರಿಸಿ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬ ಚಾರಿತ್ರಿಕ ಉಪಭಾಷೆಗಳನ್ನು, ಪ್ರಾದೇಶಿಕ ವೈಶಿಷ್ಟ್ಯವನ್ನಾಧರಿಸಿ ಕರಾವಳಿ ಕನ್ನಡ, ಒಳನಾಡಿನ ಕನ್ನಡ ಎಂದು ಎರಡು ವಿಭಾಗಗಳನ್ನು ಮಾಡಿದ್ದಾರೆ. ಮತ್ತೂ ಕೆಲ ವಿದ್ವಾಂಸರು ಕನ್ನಡದ ಉಪಭಾಷೆಗಳನ್ನು ಪ್ರಾದೇಶಿಕ ಉಪಭಾಷೆಗಳು, ಸಾಮಾಜಿಕ ಉಪಭಾಷೆಗಳು ಎಂದು ವರ್ಗೀಕರಿಸಿದ್ದಾರೆ. (ರಾಜೇಂದ್ರ ಎಂ ನಾಯಕ, ಪು–57) (ಶಾಲಿನಿರಘುನಾಥ, ಪು–28) (ಕನ್ನಡ ವಿಷಯ ವಿಶ್ವಕೋಶ, ಪು–247) ಪ್ರಸ್ತುತ ಅಧ್ಯಯನದಲ್ಲಿ ಕನ್ನಡದ ಉಪಭಾಷೆಗಳನ್ನು ಸ್ಥೂಲವಾಗಿ ಮೂರುಭಾಗಗಳಲ್ಲಿ ವರ್ಗೀಕರಿಸಿಕೊಂಡಿದೆ.

1.ಪ್ರಾದೇಶಿಕ ಉಪಭಾಷೆಗಳು

2.ಸಾಮಾಜಿಕ ಉಪಭಾಷೆಗಳು

3.ಐತಿಹಾಸಿಕ ಉಪಭಾಷೆಗಳು

ಪ್ರಾದೇಶಿಕ ಉಪಭಾಷೆಗಳು ಕರ್ನಾಟಕದ ಇಪ್ಪತ್ತೇಳು ಜಿಲ್ಲೆಗೊಂದರಂತೆ ಹಲವಾರಿವೆ. ಅಧ್ಯಯನದ ದೃಷ್ಟಿಯಿಂದ ಕನ್ನಡದ ಪ್ರಾದೇಶಿಕ ಉಪಭಾಷೆಗಳನ್ನು ನಾಲ್ಕು ಮುಖ್ಯ ಭಾಗಗಳಾಗಿ ಮಾಡಿಕೊಳ್ಳಲಾಗಿದೆ.

1.ಮೈಸೂರು ಕನ್ನಡ

2.ಧಾರವಾಡ ಕನ್ನಡ

3.ಗುಲ್ಬರ್ಗಾ ಕನ್ನಡ

4.ಕರಾವಳಿ ಕನ್ನಡ

ಕರ್ನಾಟಕದಲ್ಲಿ ನೆಲೆಸಿರುವ ಪ್ರತಿಯೊಂದು ಜಾತಿ, ವರ್ಗ, ಬುಡಕಟ್ಟುಗಳದೂ ಒಂದೊಂದು ಸಾಮಾಜಿಕ ಉಪಭಾಷೆಯಾಗಿದೆ. ಅಧ್ಯಯನದ ದೃಷ್ಟಿಯಿಂದ ಆರು ಬುಡಕಟ್ಟುಗಳ ಭಾಷೆಯನ್ನು ಸಾಮಾಜಿಕ ಉಪಭಾಷೆಗಳಾಗಿ ಆಯ್ದುಕೊಳ್ಳಲಾಗಿದೆ.

1.ಕೊರಗ ಕನ್ನಡ

2.ಗೊಂಡರ ಕನ್ನಡ

3.ಕರೆ ಒಕ್ಕಲರ ಕನ್ನಡ

4.ಜೇನು ಕುರುಬರ ಕನ್ನಡ

5. ಇಲ್ಲಿಗರ ಕನ್ನಡ

6.ಸೋಲಿಗರ ಕನ್ನಡ

ಕನ್ನಡದ ಭಾಷಾ ಚರಿತ್ರೆಯನ್ನಾಧರಿಸಿ ಕಾಲದಿಂದ ಕಾಲಕ್ಕೆ ಕನ್ನಡದಲ್ಲಿ ಆದ ಭಾಷಿಕ ಬದಲಾವಣೆಗಳನ್ನು ಐತಿಹಾಸಿಕ ಉಪಭಾಷಾ ವರ್ಗೀಕರಣದಲ್ಲಿ ದಾಖಲಿಸಲಾಗಿದೆ. ಈ ವರ್ಗೀಕರಣ ನಾಲ್ಕು ಭಾಗಗಳಲ್ಲಿದೆ.

1.ಪೂರ್ವದ ಹಳಗನ್ನಡ

2.ಹಳಗನ್ನಡ

3.ನಡುಗನ್ನಡ

4.ಹೊಸಗನ್ನಡ

ಭಾಷೆ ನಿತ್ಯ ಪರಿವರ್ತನಾಶೀಲವಾದುದು. ಇದು ಪ್ರದೇಶದಿಂದ ಪ್ರದೇಶಕ್ಕೆ, ಕಾಲದಿಂದ ಕಾಲಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ, ಜಾತಿಯಂದ ಜಾತಿಗೆ, ಸಮಾಜದಿಂದ ಸಮಾಜಕ್ಕೆ ಬದಲಾಗುತ್ತಿರುತ್ತದೆ. ಇದೇ ಉಪಭಾಷೆ ಉಂಟಾಗಲು ಪ್ರಮುಖ ಕಾರಣವಾಗಿದೆ. ಕರ್ನಾಟಕ ವಿಶಾಲವಾದ ಭೂಪ್ರದೇಶವನ್ನು ಹೊಂದಿದೆಯಾದ್ದರಿಂದ ಇಲ್ಲಿ ಪ್ರಾದೇಶಿಕ ಉಪಭಾಷೆಗಳು ಹೆಚ್ಚಾಗಿವೆ. ಕಾಡು, ಬೆಟ್ಟ, ನದಿ, ಪರ್ವತ, ಪ್ರಾಕೃತಿಕ ಅಡೆತಡೆಗಳು , ಅನ್ಯ ಭಾಷಿಕರ ಆಡಳಿತ,

ಆಕ್ರಮಣಕ್ಕೆ ಒಳಗಾಗಿದ್ದ ಕನ್ನಡದ ಹಲವು ಪ್ರದೇಶಗಳು ಭಿನ್ನ ಭಾಷಿಕ ರೂಪಗಳನ್ನು ಹೊಂದಲು ಕಾರಣವಾಗಿದೆ. ಕರ್ನಾಟಕದ ಉತ್ತರಕ್ಕೆ ಮಹಾರಾಷ್ಟ್ರ, ಪಶ್ಚಿಮಕ್ಕೆ ಕೇರಳ, ಉತ್ತರ ಪಶ್ಚಿಮಕ್ಕೆ ಗೋವ ರಾಜ್ಯಗಳಿರುವುದರಿಂದ  ಕರ್ನಾಟಕದ ಗಡಿ ಪ್ರದೇಶಗಳಲ್ಲಿ ಪ್ರಾದೇಶಿಕ ಉಪಭಾಷೆಗಳು ಹೆಚ್ಚವೆ. ಗಡಿ ಪ್ರದೇಶಗಳ ಭಾಷಾ ರೂಪಗಳಲ್ಲಿ ತಮಿಳು, ಮಲೆಯಾಳ, ಕೊಂಕಣಿ, ಮರಾಠಿ, ತೆಲುಗು ಭಾಷೆಗಳ ಪ್ರಭಾವವನ್ನು ಕಾಣಬಹುದು.

ಪಶ್ಚಿಮ ಘಟ್ಟಗಳ ಉತ್ತರದ ಬೆಟ್ಟಗಳು ಕರಾವಳಿ ಪ್ರದೇಶದ ಉದ್ದಕ್ಕೂ ಹಬ್ಬಿಕೊಂಡಿವೆ. ನೀಲಗಿರಿ, ಕೊಡಚಾದ್ರಿ, ಬ್ರಹ್ಮಗಿರಿ ಮತ್ತು ಕುದುರೆ ಮುಖ ಬೆಟ್ಟಗಳ ಸಾಲುಗಳು ದಕ್ಷಿಣ ಕರಾವಳಿ ಉತ್ತರ ಕರಾವಳಿ ಎಂಬೆರಡು ವಿಭಾಗಗಳನ್ನು ಮಾಡಿದೆ. ಕರಾವಳಿ ಕನ್ನಡ ಮತ್ತು ಮಲೆನಾಡು ಕನ್ನಡ ಭಾಷಾ ರೂಪಕ್ಕೆ ಈ ಬೆಟ್ಟ ಸಾಲುಗಳು ಕಾರಣವಾಗಿವೆ. ಕರಾವಳಿ ಕನ್ನಡದ ಒಳ ಪ್ರದೇಶಗಳಾದ ದಕ್ಷಿಣ ಕನ್ನಡದ ಮೇಲೆ ತುಳು, ಕೊಂಕಣಿ, ಮಲೆಯಾಳಂನ ಪ್ರಭಾವವಿದೆ. ಉತ್ತರ ಕನ್ನಡದ ಮೇಲೆ ಇವುಗಳ ಪ್ರಭಾವ ಕಡಿಮೆ. ಬಳ್ಳಾರಿಯ ಸಂಡೂರಿನ ಬಳಿಯ ಸಂಡೂರು ಬೆಟ್ಟಗಳು ಹೊಸಪೇಟೆ, ಶಿರಗುಪ್ಪ, ಸಿಂಧನೂರು ಉಪಭಾಷಾ ಪ್ರದೇಶಗಳಾಗಲು ಕಾರಣವಾಗಿದೆ. ಪೂರ್ವ ಘಟ್ಟದ ಬಿಡಿ ಸಾಲುಗಳ ಬೆಟ್ಟಗಳು ಮೈಸೂರು, ಚಾಮರಾಜನಗರ, ತುಮಕೂರು, ಚಿತ್ರದುರ್ಗ, ಕೋಲಾರ ಜಿಲ್ಲೆಗಳಲ್ಲಿ ಕಂಡುಬರುತ್ತದೆ. ಇಲ್ಲಿ ಜನಸಂಪರ್ಕಕ್ಕೆ ಯಾವುದೇ ಅಡ್ಡಿಗಳಿರದಿರುವುದರಿಂದ ಭಾಷಿಕ ವೈವಿಧ್ಯತೆಗಳು ಅಷ್ಟಾಗಿ ಇಲ್ಲ.

ಕರ್ನಾಟಕದಲ್ಲಿ ಹರಿಯುವ ನದಿಗಳಾದ ಕೃಷ್ಣ, ತುಂಗಭದ್ರಾ, ಭೀಮಾ, ಮಲಪ್ರಭಾ, ಹೇಮಾವತಿ, ನೇತ್ರಾವತಿ, ಕಾವೇರಿ ಮೊದಲಾದವು ಕನ್ನಡದ ಉಪಭಾಷೆಗಳಿಗೆ ಕಾರಣವಾಗಿದೆ. ಈ ನದಿಗಳ ಎರಡು ಕಡೆ ವಾಸಿಸುವ ಜನರು ಆಡುವ ಕನ್ನಡದಲ್ಲಿ ಭಾಷಾ ಪ್ರಭೇದಗಳು ಉಂಟಾಗಿವೆ. ಕೃಷ್ಣ–ತುಂಗಭದ್ರ ನದಿಗಳ ಮಧ್ಯದಲ್ಲಿರುವ ರಾಯಚೂರು, ತುಂಗಭದ್ರ ನದಿ ಹರಿಯುವ ಶಿವಮೊಗ್ಗ, ಬೀಜಾಪುರ, ಧಾರವಾಡದ ಗಡಿಗಳಲ್ಲಿ ಹರಿಯುವ ಮಲಪ್ರಭಾ, ಕಲುಬುರ್ಗಿಯಲ್ಲಿ ಹರಿಯುವ ಭೀಮಾ, ಈ ನದಿಗಳು ಹರಿಯುವ ಪ್ರದೇಶಗಳಲ್ಲಿ ಕನ್ನಡದ ಭಾಷಾರೂಪಗಳನ್ನು ಕಾಣಬಹುದಾಗಿದೆ. ತುಂಗಭದ್ರಾ ನದಿ ರಾಯಚೂರು ಬಳ್ಳಾರಿ ಕನ್ನಡಗಳ ಪ್ರಭೇದಕ್ಕೆ ಕಾರಣವಾದರೆ, ಕಲುಬುರ್ಗಿಯೊಳಗೆ ಹರಿಯುವ ಭೀಮಾನದಿ ಉತ್ತರ ಮತ್ತು ದಕ್ಷಿಣ ಪ್ರಭೇದಕ್ಕೆ ಕಾರಣವಾಗಿದೆ. ಮಲಪ್ರಭಾ ನದಿ ಬೀಜಾಪುರ ಮತ್ತು ರಾಯಚೂರು ಜಿಲ್ಲೆಗಳ ಭಾಷಾ ಪ್ರಭೇದಕ್ಕೆ ಕಾರಣವಾಗಿದೆ.

ಬೀದರ್, ಕಲುಬುರ್ಗಿ, ರಾಯಚೂರು, ಬೀಜಾಪುರ ಪ್ರದೇಶಗಳು ಈ ಹಿಂದೆ ಮಹದೀಯರ ಆಡಳಿತಕ್ಕೆ ಒಳಪಟ್ಟಿತ್ತು, ಉರ್ದು ಆಡಳಿತ ಭಾಷೆಯು ಆಗಿತ್ತು. ಅದರ

ಪ್ರಭಾವವನ್ನು ಈ ಪ್ರದೇಶಗಳ ಉಪಭಾಷೆಗಳಲ್ಲಿ ಕಾಣಬಹುದು. ಇದೇ ಪ್ರದೇಶದ ವಾಯುವ್ಯ ಮತ್ತು ಉತ್ತರದ ಗಡಿಭಾಗಗಳು ಮರಾಠರ ವಶದಲ್ಲಿದ್ದವು. ಉತ್ತರ ಕರ್ನಾಟಕದ ಮುಧೋಳ, ಜಮಖಂಡಿ, ನರಗುಂದ ಮರಾಠರ ಆಳ್ವಿಕೆಗೆ ಒಳಪಟ್ಟಿದ್ದವು ಹೀಗಾಗಿ ಮರಾಠಿ ಭಾಷೆಯ ಪ್ರಭಾವ ಈ ಉಪಭಾಷೆಗಳ ಮೇಲೆ ಆಗಿದೆ. ಕಾಸರಗೋಡು, ನೀಲಗಿರಿ, ತಾಳವಾಡಿ, ಅಕ್ಕಲಕೋಟೆ, ಸೊಲ್ಲಾಪುರ ಮೊದಲಾದ ಪ್ರದೇಶಗಳು ಅನ್ಯ ಭಾಷಿಕ ರಾಜರ ಆಡಳಿತಕ್ಕೆ ಒಳಗಾಗಿದ್ದರಿಂದ ಅದರ ಪ್ರಭಾವವು ಈ ಉಪಭಾಷೆಗಳ ಮೇಲೆ ಆಗಿದೆ.

ಧರ್ಮ, ಜಾತಿ, ಸಂಸ್ಕೃತಿ, ವೃತ್ತಿ, ವರ್ಗ, ಶಿಕ್ಷಣ, ಲಿಂಗ ಮೊದಲಾದ ಸಾಮಾಜಿಕ ಅಂಶಗಳು ಸಾಮಾಜಿಕ ಉಪಭಾಷೆಗಳಿಗೆ ಕಾರಣವಾಗಿದೆ. ಭಾಷೆಯು ಸಮಾಜ ಸಂಸ್ಕೃತಿಯೊಡನೆ ಹೊಂದಿಕೊಂಡು ಬಾಳುತ್ತದೆ. ಭಾಷೆ ಸಾಮಾಜಿಕ ವ್ಯಕ್ತಿಯ ಅನುವಂಶಿಕ ಆಸ್ತಿ ಆದ್ದರಿಂದಾಗಿ ವ್ಯಕ್ತಿ ತನ್ನ ಭಾಷೆ, ಸಂಸ್ಕೃತಿಯನ್ನು ಕಾಪಾಡಿಕೊಳ್ಳುವ ಪ್ರಯತ್ನಗಳನ್ನು ಮಾಡುತ್ತಿರುತ್ತಾನೆ. ಭಾಷೆ ಒಂದು ಸಮಾಜದ ಸಾಮಾಜಿಕ ವಸ್ತು. ಭಾಷೆ ಇಲ್ಲದ ಸಂಸ್ಕೃತಿಯನ್ನಾಗಲಿ ಸಂಸ್ಕೃತಿ ಇಲ್ಲದ ಭಾಷೆಯನ್ನಾಗಲಿ ಕಲ್ಪಿಸಿಕೊಳ್ಳಲು ಅಸಾಧ್ಯ. ಒಂದನ್ನು ಬಿಟ್ಟು ಒಂದು ಅಸ್ತಿತ್ವವನ್ನು ಪಡೆಯಲಾರವು. ಆದ್ದರಿಂದ ಭಾಷೆ ವ್ಯಕ್ತಿ, ಸಮಾಜ, ಸಾಹಿತ್ಯಗಳನ್ನು ಸಂಸ್ಕೃತಿಯನ್ನು ಒಟ್ಟುಗೂಡಿಸುವ ಶಕ್ತಿಯುತ ಸಾಧನವಾಗಿದೆ.

ಒಂದೇ ಧರ್ಮ, ಒಂದೇಜಾತಿ, ಒಂದೇ ಸಂಸ್ಕೃತಿ, ಒಂದೇ ಜನಾಂಗಕ್ಕೆ ಸೇರಿದವರ ಭಾಷೆಯು ಒಂದೇ ರೀತಿಯಾಗಿರುವುದಿಲ್ಲ ಅವರು ವಾಸಿಸುವ ಪರಿಸರಕ್ಕನುಗುಣವಾಗಿ ಒಂದೇ ಜನಾಂಗದ ಭಾಷೆಗಳು ಬೇರೆ ಬೇರೆಯಾಗಿರಬಹುದು ಹವ್ಯಕ ಕನ್ನಡ ಒಂದು ಸಾಮಾಜಿಕ ಉಪಭಾಷೆ. ಹವ್ಯಕ ಜನಾಂಗಕ್ಕೆ ಸೇರಿದ ಎಲ್ಲರೂ ಒಂದೇ ಕನ್ನಡವನ್ನು ಮಾತನಾಡುವುದಿಲ್ಲ. 'ಬರಲಿಲ್ಲ' ಎನ್ನುವ ಕನ್ನಡ ಕ್ರಿಯಾಪದ ಸಿದ್ದಾಪುರ ತಾಲ್ಲೂಕಿನ ಹವ್ಯಕರಲ್ಲಿ 'ಬೈಂದ್ನಿಲ್ಲೆ' ಎಂದು, ಶಿರಸಿ ತಾಲ್ಲೂಕಿನ ಹವ್ಯಕರಲ್ಲಿ 'ಬಂಜ್ನಿಲ್ಲೆ' ಎಂದು, ಯಲ್ಲಾಪುರ, ಹೊನ್ನಾವರ, ಕುಮುಟ ತಾಲ್ಲೂಕಗಳ ಹವ್ಯಕರಲ್ಲಿ 'ಬಂದೀನಿಲ್ಲೆ' ಎಂದು ಬಳಕೆಯಾಗುತ್ತದೆ. ಬನವಾಸಿಯ ಸುತ್ತಮುತ್ತಲಿನ ಹವ್ಯಕರಲ್ಲಿ ಬರಲಿಲ್ಲೆ ಎಂಬ ರೂಪಗಳನ್ನು ಪಡೆದುಕೊಂಡಿದೆ. (ಶಾಲಿನಿ ರಘುನಾಥ, ಪು–15) ಹೀಗೆ ಒಂದೇ ಜಾತಿಯ ಜನಾಂಗಕ್ಕೆ ಸೇರಿದ ಕನ್ನಡ ಭಾಷೆಯಲ್ಲಿಯೇ ಹಲವು ಭಾಷಾರೂಪಗಳು ಕಾಣಸಿಗುತ್ತವೆ.

ಸಮಾಜದಲ್ಲಿರುವ ಜಾತಿ, ಶ್ರೇಣಿವ್ಯವಸ್ಥೆ, ಸ್ಥಾನಮಾನಗಳು ಸಾಮಾಜಿಕ ಉಪಭಾಷೆ ಗಳಿಗೆ ಕಾರಣವಾಗಿದೆ. ವ್ಯಕ್ತಿ ಭಾಷೆಗು ಸಾಮಾಜಿಕ ವರ್ಗಗಳಿಗೂ ಸಂಬಂಧವಿರುತ್ತದೆ. ವಿದ್ಯಾವಂತರು, ಅವಿದ್ಯಾವಂತರು, ಗ್ರಾಮೀಣ ಮತ್ತು ನಗರಪ್ರದೇಶಗಳ ಜನರ ಭಾಷೆಗೂ

ವ್ಯತ್ಯಾಸವಿದೆ. ವಿದ್ಯಾವಂತರು ಮೇಲು ವರ್ಗವದವರ ಆಡುಮಾತಿನಲ್ಲಿ ಬರುವ ಮಹಾಪ್ರಾಣಾಕ್ಷರಗಳು ಅವಿದ್ಯಾವಂತರು, ಕೆಳವರ್ಗದವರ ಮಾತಿನಲ್ಲಿ ಬಳಕೆಯಲ್ಲಿಲ್ಲ. ಉದಾ: ಫಲ>ಪಲ, ಭಾಷೆ>ಬಾಸೆ, ಮಾದೇಶ>ಮಾದೇಸ, ಘಂಟೆ>ಗಂಟೆ, ಛತ್ರಿ>ಚತ್ರಿ, ವಿಠ್ಠಲ>ವಿಟ್ಲ. ಕನ್ನಡದ ಸಾಮಾಜಿಕ ಬುಡುಕಟ್ಟುಗಳ ಮಾತಿನಲ್ಲಿ ಷ, ಶ ಕಾರಗಳು ಸ ಕಾರವಾಗಿ ಬಳಕೆಯಾಗುತ್ತವೆ. ಕೆಳ ಸಮುದಾಯಾದ ಜನರ ಆಡುಮಾತಿನಲ್ಲಿ ಒತ್ತಕ್ಷರ ಲೋಪವಾಗುತ್ತದೆ. ಕ್ಷಣ>ಚಣ, ಸಂಕ್ರಾಂತಿ>ಸಂಕುರಾತಿ. ಮೇಲುವರ್ಗ ಕೆಳವರ್ಗದ ಆಡುಮಾತಿನಲ್ಲಿ ಭಿನ್ನರೂಪಗಳ ಬಳಕೆಯಿದೆ. ಬೆಳಗ್ಗೆ>ಒತ್ತಾರೆ, ಇಡು>ಮಡಗು, ಮುದ್ದೆ>ಹಿಟ್ಟು, ಕ್ಷೌರ>ಚೌರ. ಕೆಲವು ಪ್ರದೇಶಗಳ ಜನರು ಆಡುವ ಕನ್ನಡದಲ್ಲಿ ಅರ್ಥ ವ್ಯತ್ಯಾಸಗಳಿವೆ. ಬ್ರಾಹ್ಮಣ ಕನ್ನಡದಲ್ಲಿ ಅಂಬ್ರ ಎನ್ನುವುದು ತಿನ್ನುವ ಪದಾರ್ಥ ಗೊಂಡರ ಕನ್ನಡದಲ್ಲಿ ಅಂಬ್ರ ಎನ್ನುವುದು ಕ್ರಿಯಾಪದದ ಅಂತ್ಯದಲ್ಲಿ ಬರುವ ಪ್ರತ್ಯಯ. ಆಯ್ತುಂಬ್ರು, ಹೋದ್ನಂಬ್ರು, ಕೇಳ್ನಂಬ್ರ ಇತ್ಯಾದಿ.

ಹೀಗೆ ಕನ್ನಡ ಭಾಷೆಯ ಬೇರೆ ಬೇರೆ ಜನಾಂಗಲ್ಲಿ ಬೇರೆ ಬೇರೆ ಭಾಷಿಕ ರೂಪವು ಕನ್ನಡದ ಸಾಮಾಜಿಕ ಉಪಭಾಷೆಗಳಿಗೆ ಕಾರಣವಾಗಿದೆ. ಕರ್ನಾಟಕದಲ್ಲಿ ಜೇನುಕುರುಬ, ಸೋಲಿಗ, ಇರುಳ, ಗೊಂಡ, ಬಡಗ ಮೊದಲಾದ ಸಮುದಾಯಗಳಿದ್ದು ಸಾಂಸ್ಕೃತಿಕ, ಧಾರ್ಮಿಕ ವೈಶಿಷ್ಟ್ಯಗಳು ಅವರ ಆಡುಭಾಷೆಯ ಮುಲಕ ಅಭಿವ್ಯಕ್ತಿಗೊಂಡಿವೆ. ಭೌತಿಕ ಸಂಸ್ಕೃತಿಯನ್ನು ಭೌದ್ಧಿಕ ರೂಪದ ಭಾಷೆ ನಿರಂತರವಾಗಿ ಮುಂದುವರಿಸುವ ಕಾರ್ಯವನ್ನು ಆ ಸಮಾಜದ ಭಾಷೆ ಮಾಡುತ್ತಿದೆ. ಜೇನು ಕುರುಬರು ಜೇನು ಕೀಳುವಾಗ ಹೇಳುವ ಕೆಲ ಹಾಡುಗಳು ಇದಕ್ಕೆ ಉದಾಹರಣೆಯಾಗಿದೆ. "ಜೇನೆ ಹೋಗುವಾಗ ಒಂದೇ ದಾರಿ ಬರುವಾಗ ದಿಕ್ಕಾಪಾಲು". ಜೇನನ್ನು ಕರಿತು ಅವರಿಗಿರುವ ಜ್ಞಾನವನ್ನು ಈ ಸಾಲುಗಳು ಹಿಡಿದಿಡುತ್ತವೆ. ಇಂದು ಬುಡಕಟ್ಟುಗಳು, ಹಲವು ಜಾತಿ, ವರ್ಗಗಳ ಜನರು ವಿದ್ಯಾವಂತರಾಗುತ್ತಿದ್ದಾರೆ. ಇವರು ಪ್ರಮಾನ ಭಾಷೆಗೆ ಹತ್ತಿರವಾಗುತ್ತರುವುದರಿಂದ ಮತ್ತು ಜನರ ನಡುವೆ ಸಂಪರ್ಕ ಸುಲಭವಾಗಿರುವುದರಿಂದ ಸಾಮಾಜಿಕ ಉಪಭಾಷಾ ವೈಶಿಷ್ಟ್ಯಗಳು ಮಸುಕಾಗುತ್ತಿವೆ. ಅವುಗಳು ಅಳಿಯುವ ಮುನ್ನ ದಾಖಲಿಸುವ ಪ್ರಯತ್ನ ಸಾಮಾಜಿಕ ಉಪಭಾಷೆಗಳ ಅಧ್ಯಯನದ ಮೂಲಕ ಆಗಬೇಕಾಗಿದೆ.

ಅಧ್ಯಾಯ 5

# ಪ್ರಾದೇಶಿಕ ಉಪಭಾಷೆಗಳು

## ಮೈಸೂರು ಕನ್ನಡ

ಬೆಂಗಳೂರು, ಕೋಲಾರ, ತುಮಕೂರು, ಶಿವಮೊಗ್ಗ, ಚಿತ್ರದುರ್ಗ, ಹಾಸನ ಚಿಕ್ಕಮಗಳೂರು, ಮಂಡ್ಯ, ಮೈಸೂರು ಜಿಲ್ಲೆಗಳ ಕನ್ನಡವನ್ನು ಮೈಸೂರು ಕನ್ನಡ ಎಂದು ಕರೆಯಲಾಗುತ್ತದೆ. ಇಂದು ಈ ಎಲ್ಲಾ ಜಿಲ್ಲೆಗಳ ಕನ್ನಡ ತಮ್ಮದೇ ವಿಶೇಷತೆಯನ್ನು ಹೊಂದಿ ಭಾಷಿಕ ರೂಪಗಳಾಗಿ ಬೆಳೆದು ಬೇರೆ ಬೇರೆ ಉಪಭಾಷೆಗಳೆನಿಸಿವೆ. ಆದರೂ ಈ ಭಾಷಾರೂಪಗಳಲ್ಲಿನ ಧ್ವನಿ, ಧ್ವನಿಮಾ, ಆಕೃತಿಮಾ, ವಾಕ್ಯರಚನೆ, ಸ್ವರ ವ್ಯಂಜನಗಳಲ್ಲಿರುವ ಸಾಮ್ಯತೆಯನ್ನಾಧರಿಸಿ ಮೈಸೂರು ಕನ್ನಡ ಎಂಬ ವರ್ಗೀಕರಣ ಮಾಡಿಕೊಳ್ಳಬಹುದಾಗಿದೆ.

ಮೈಸೂರು ಕನ್ನಡ ಶಿಷ್ಟಭಾಷೆಗೆ ಸಮೀಪವಾಗಿದೆ. ಮೈಸೂರು ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ. ಈ ಹಿಂದೆ ಮೈಸೂರು ಸಾಂಸ್ಕೃತಿಕವಾಗಿ ಹಾಗೂ ವ್ಯಾಪರದ ಕೇಂದ್ರವಾಗಿತ್ತು. ಇಲ್ಲಿನ ಭಾಷೆ ಆಡಳಿತ ಭಾಷೆಯೂ ಆಗಿದ್ದಿತು. ಆದ್ದರಿಂದ ಮೈಸೂರು ಕನ್ನಡ ಪ್ರಮಾಣ ಭಾಷೆಗೆ ತೀರಾ ಹತ್ತಿರದಲ್ಲಿದೆ. ಮೈಸೂರು ಕನ್ನಡದ ಮೇಲೆ ತಮಿಳು ತೆಲುಗು ಆಂಗ್ಲಭಾಷೆಯ ಪ್ರಭಾವವಿದೆ. ಆದರೂ ತನ್ನ ವೈಶಿಷ್ಟ್ಯವನ್ನು ಮೈಸೂರು ಕನ್ನಡ ಕಳೆದುಕೊಡಿಲ್ಲ. ಮೈಸೂರು ಕನ್ನಡದ ಗಡಿಭಾಗಗಳು ಅನ್ಯ ಭಾಷೆ ಗಳ ಪ್ರಭಾವಕ್ಕೊಳಗಾಗಿದೆ. ಶಿವಮೊಗ್ಗ, ಚಿತ್ರದುರ್ಗ, ದಾವಣಗೆರೆ, ಜಿಲ್ಲೆಗಳ ಉತ್ತರ ಭಾಗದ ಮೇಲೆ ಧಾರವಾಡ ಕನ್ನಡದ ಪ್ರಭಾವವಿದೆ. ಬೆಂಗಳೂರಿನ ಪೂರ್ವಭಾಗದ ತಾಲ್ಲೂಕುಗಳ ಮೇಲೆ ತೆಲುಗಿನ ಪ್ರಭಾವವಿದೆ. ಕೊಡಗು, ದಕ್ಷಿಣಕನ್ನಡ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಮಲೆಯಾಳಂ ಭಾಷೆಯ ಪ್ರಭಾವವನ್ನು ಮೈಸೂರು ಕನ್ನಡದಲ್ಲಿ ಗುರುತಿಸ ಬಹುದಾಗಿದೆ.

ಮೈಸೂರು ಕನ್ನಡದ ವ್ಯಾಪ್ತಿಯ ಭಾಷಾ ಪ್ರದೇಶದ ಒಳಗೆ ಒಕ್ಕಲಿಗರು, ಕೊರಗರು, ಗೊಲ್ಲರು, ಸೋಲಿಗರ, ಇಲ್ಲಿಗರು ಮೊದಲಾದ ಸಮುದಾಯಗಳು ನೆಲೆಸಿವೆ. ಈ ಸಮುದಾಯದ ಒಳಗೇ ಒಳಪಂಗಡಗಳಿವೆ. ಇವುಗಳ ಭಾಷಾ ರೂಪಗಳು ಸ್ಥೂಲವಾಗಿಯಾಗಿಯಾದರೂ ಮೈಸೂರು ಕನ್ನಡವನ್ನು ಹೋಲುತ್ತದೆ. ಮೈಸೂರು ಕನ್ನಡ ಒಂದು ಪ್ರಾದೇಶಿಕ ಉಪಭಾಷೆ. ಇದರಲ್ಲಿ ಇಲ್ಲಿಯೇ ನೆಲೆಸಿರುವ ಸಮಾಜಗಳ ಸಾಮಾಜಿಕ ಉಪಭಾಷೆಯು ಕ್ರಿಯಾಶೀಲವಾಗಿದೆ. ಇವು ಪ್ರಾದೇಶಿಕ ಉಪಭಾಷೆ ಮೇಲೆ ತಮ್ಮದೇ ಪ್ರಭಾವವನ್ನು ಬೀರುತ್ತದೆ. ನಿದರ್ಶನಕ್ಕೆ ಮೈಸೂರು ಕನ್ನಡದ ಮಧ್ಯಮ ವರ್ಗದ

ಭಾಷಾರೂಪವನ್ನು ಪೂರ್ವ ಪಶ್ಚಿಮ ಮಧ್ಯ ಎಂದು ವಿಭಾಗಿಸಿಕೊಂಡರೆ, ಪದದ ಆದಿಯ ಹ ಕಾರ ಲೋಪವಾಗುವ ಪ್ರಕ್ರಿಯೆ ಪೂರ್ವ ಮತ್ತು ಮಧ್ಯ ಪ್ರಭೇದಗಳಲ್ಲಿ ನಡೆಯುತ್ತದೆ. ಹಾಲು>ಆಲು, ಹಕ್ಕಿ>ಅಕ್ಕಿ, ಹೇಳು>ಏಳು, ಹುಳಿ>ಉಳಿ ಇತ್ಯಾದಿ. ಪಶ್ಚಿಮ ಪ್ರಭೇದದಲ್ಲಿ ಈ ಬದಲಾವಣೆಯಿಲ್ಲ.

ಮೈಸೂರು ಕನ್ನಡದಲ್ಲಿ ಬಳಕೆಯಲ್ಲಿರುವ ಸ್ವರ ಧ್ವನಿಮಾಗಳಲ್ಲಿ ಹತ್ತು ಪ್ರಧಾನ ಸ್ವರ ಧ್ವನಿಗಳಿವೆ. ಅ, ಇ, ಉ, ಎ, ಒ ಐದು ಹ್ರಸ್ವ ಸ್ವರಗಳಾಗಿವೆ. ಆ, ಈ, ಊ, ಏ, ಓ ಇವುಗಳು ದೀರ್ಘ ಸ್ವರಗಳು. ಅ,ಇ,ಉ,ಎ,ಒ ಕೆಲವು ವೇಳೆ ಸ್ವತಂತ್ರ ಧ್ವನಿಮಾಗಳಾಗಿ ಬಳಕೆಗೊಂಡು ಗೌಣ ಧ್ವನಿಮಾಗಳೆನಿಸುತ್ತವೆ. ಅಲ್ಲದೆ ಎ, ಏ, ಒ, ಓ ಸ್ವರಗಳು ಅವಿದ್ಯಾವಂತರಲ್ಲಿ ಯ ಕಾರ ವ ಕಾರವಾಗಿ ಪ್ರಯೋಗಗೊಳ್ಳುತ್ತವೆ.

ಎ ಬೇರೆ>ಬ್ಯಾರೆ, ಬೆಲೆ>ಬ್ಯಲೆ, ನೆರೆ>ನ್ಯರೆ

ಏ ಕೇರೆ>ಕ್ಯಾರೆ, ಬೇರೆ>ಬ್ಯಾರೆ, ಪೇಟೆ>ಪ್ಯಾಟೆ

ಒ ಗೊನೆ>ಗ್ವನೆ, ನೊರೆ>ನ್ವರೆ, ಕೊಳೆ>ಕ್ವಳೆ

ಓ ಗೋಡೆ>ಗ್ವಾಡೆ, ಕೋಣ>ಕ್ವಾಣ, ತೋಟ>ತ್ವಾಟ

ಪದದ ಆದಿಯ ಮತ್ತು ಮಧ್ಯದಲ್ಲಿ ಬರುವ ಎ, ಏ, ಒ, ಓ ಕಾರಗಳು ಕ್ರಮವಾಗಿ ಯ ಕಾರ ವ ಕಾರಗಳಾಗಿ ಬದಲಾಗುತ್ತವೆ.

ಎ ಎಲ್ಲಾ>ಯೆಲ್ಲಾ, ಹೆಣ್ಣು>ಯೆಣ್ಣು, ಎದೆ>ಯೆದೆ

ಏ ಬೇಳೆ>ಬ್ಯಾಳೆ, ಬೇಸರ>ಬ್ಯಾಸ್ರ, ಜೋಳ>ಜ್ವಾಳ

ಓ ಗೋಮಾಳೆ>ಗ್ವಾಮಾಳೆ ಕೋಡು>ಕ್ವಾಡು

ಇ ಇಲ್ಲಿ>ಯಿಲ್ಲಿ, ಇಲಿ>ಯಲಿ

ಅ ಅಪ್ಪ>ಯಪ್ಪ, ಅವ್ವ>ಯವ್ವ, ಅಕ್ಕ>ಯಕ್ಕ

ಪದದ ಆದಿಯ ಒ ಓ ಕಾರಗಳು ವ ಕಾರಗಳಾಗಿ ಪ್ರಯೋಗವಾಗುತ್ತವೆ.

ಒಂದು>ವಂದು, ಓದು>ವ್ವಾದು>ವಾದು, ಒಲೆ>ವಲೆ, ಒಬ್ಬ>ವಬ್ಬ

ಲಘು ಅಕ್ಷರಗಳಿರುವ ಪದಗಳಲ್ಲಿ ಅಕ್ಷರ ಲೋಪವಾಗುತ್ತದೆ. ಮೂರು ಅಕ್ಷರದ ಪದದಲ್ಲಿ ಸಾಮಾನ್ಯವಾಗಿ ಮೂರನೇ ಅಕ್ಷರ ಲೋಪವಾಗುತ್ತದೆ.

ಅಗಸ>ಅಗ್ಸ, ಕೂದಲು>ಕೂದ್ಲು, ಕನ್ನಡಕ>ಕನ್ನಡ್ಕ, ಮರಳು>ಮಳ್ಳು, ಬೆರಳು>ಬೆಳ್ಳು ಸಿಡಿಲು>ಸಿಡ್ಲು, ನೆರಳು>ನೆಳ್ಳು, ಕೊಡಲಿ>ಕೊಡ್ಲಿ, ಕುಡುಗೋಲು>ಕುಡ್ಲು

ಕೆಲವು ಶಬ್ದಗಳಲ್ಲಿ ಕಂಠ್ಯ ಕ ವ್ಯಂಜನ ತಾಲವ್ಯ ಚ ಕಾರವಾಗಿ ತಾಲವ್ಯೀಕರಣಗೊಂಡಿದೆ.

ಕೆರೆ>ಚೆರೆ, ಕೀಳು>ಚೀಳು, ಕೆಂಪು>ಚೆಂಪು, ಕಿವಿ>ಚಿವಿ, ಕೇರು>ಚೇರು, ಕೀವು>ಚೀವು

ಕೆಲವು ಶಬ್ದಗಳಲ್ಲಿ ಆದಿಯ ಶ ಕಾರ ಸ ಕಾರವಾಗಿ ಬದಲಾಗುತ್ತದೆ.

ಶೂಲ>ಸೂಲ, ಶಾಲು>ಸಾಲು, ಶಿವ>ಸಿವ, ಶಂಕರ>ಸಂಕರ, ಮಾದೇಶ>ಮಾದೇಶ

ಕೆಲವು ಶಬ್ದಗಳಲ್ಲಿ ಆದಿಯ ಇ, ಈ, ಉ, ಏ ಸ್ವರಗಳು ಚ, ಜ ಕಾರಗಳಾಗಿ ಪರಿವರ್ತನೆ ಹೊಂದುತ್ತದೆ.

ಕಿವಿ>ಚಿವಿ, ಕೆಲಸ>ಚೆಲ್ಸ, ಕೀಳು>ಚೀಳು, ಕೇಳು>ಚೇಳು, ಗಿಡ>ಜಿಡ, ಗೆಲ್ಲು>ಜೆಲ್ಲು, ಗೀರು>ಜೀರು, ಗೇಣು>ಜೇಣು, ದಿನ>ಜಿನ, ದಿನ್ನಿ>ಜಿನ್ನಿ

ಕೆಲವು ಶಬ್ದಗಳಲ್ಲಿ ಹ ಕಾರ ಅಗತ್ಯವಿಲ್ಲದಿದ್ದರೂ ಉಚ್ಚಾರದ ಒತ್ತಡದಿಂದ ಹ ಕಾರ ಬಂದು ಸೇರುತ್ತದೆ.

ಅಲಂಕಾರ>ಹಲಂಕಾರ, ಇನ್ನು>ಹಿನ್ನು, ಇದೆ>ಹಿದೆ, ಈರುಳ್ಳಿ>ಹೀರುಳ್ಳಿ,

ಕೆಲವು ಶಬ್ದಗಳಲ್ಲಿ ಹ ಕಾರದಿಂದ ಆರಂಭವಾಗುವ ಶಬ್ಧಗಳು ಅ, ವ, ಯ ಕಾರಗಳಾಗಿ ಸುಲಭೋಚ್ಚಾಗೊಳ್ಳುತ್ತವೆ.

ಹಣ್ಣು>ಅಣ್ಣು, ಹೊಲ>ವಲ, ಹಿಮ್ಮಡಿ>ಇಮ್ಮಡಿ, ಹತ್ತು>ಅತ್ತು, ಹಲ್ಲು>ಅಲ್ಲು, ಹೇಳು>ಏಳು

ಕೆಲವು ಶಬ್ದಗಳಲ್ಲಿ ಆದಿಯ ವ ಕಾರ ಉಚ್ಚಾರಣೆಯಲ್ಲಿ ಕೆಲವು ವೇಳೆ ಬಿದ್ದುಹೋಗುತ್ತದೆ.

ವಿಮಾನ>ಇಮಾನ, ವಿಸ>ಇಸ, ವಿಭೂತಿ>ಇಭೂತಿ, ವಿಚಾರ>ಇಚಾರ, ವಿಲಾಯ್ತಿ>ಇಲಾಯ್ತಿ

ಕೆಲವು ಶಬ್ದಗಳಲ್ಲಿ ಸ ಕಾರವು ಚ ಕಾರವಾಗಿ ಬದಲಾಗುತ್ತದೆ.

ಸಕ್ಕರೆ>ಚಕ್ಕರೆ, ಸಾಲು>ಚಾಲು, ಸಾರ್ಸು>ಚಾರ್ಸು, ಸಾಪೆ>ಚಾಪೆ

ಕೆಲವು ಶಬ್ದಗಳಲ್ಲಿ ಉಚ್ಚಾರಣೆಯಲ್ಲಿ ಸ್ವರ ಅಕ್ಷರ ಬಿದ್ದುಹೋಗುತ್ತದೆ.

ವಾಹನ>ವಾನ, ತಾಪತ್ರಯ>ತಾಪತ್ರೆ, ಇರುವೆ>ಇರ್ವೆ, ಹೊಸ್ತಿಲು>ವಸ್ಲು, ಕಾಲರ>ಕಾರ್ಲ

ಶಿವಮೊಗ್ಗ, ಚಿತ್ರದುರ್ಗ, ದಾವಣಗೆರೆ ಜಿಲ್ಲೆಯ ಉತ್ತರ ಭಾಗದ ತಾಲ್ಲುಕುಗಳಲ್ಲಿ ಧಾರವಾಡ ಕನ್ನಡದ ಪ್ರಭಾವದಿಂದಾಗಿ ನಾಮಪದಗಳ ಅಂತ್ಯ ಸ್ವರ ಎ ಕಾರವು ಇ ಕಾರವಾಗಿ ಬದಲಾಗುತ್ತದೆ. ಉ ಕಾರಾಂತ ನಾಮ ಪ್ರಕೃತಿಗಳು ಅ ಕಾರಾಂತವಾಗುತ್ತವೆ

ಕೋಣೆ>ಕ್ವಾಣಿ, ಕೆನೆ>ಕೆನಿ, ಸಕ್ಕರೆ>ಸಕ್ರಿ, ಹಸು>ಹಸ, ಹಲ್ಲು>ಹಲ್ಲ, ತೂತು>ತೂತ, ದ್ವಾಸೆ>ದ್ವಾಸಿ

ಆಡುಮಾತಿನಲ್ಲಿ ಏಕಾಕ್ಷರ ನಾಮಪ್ರಕೃತಿಗಳು ಮತ್ತು ಕ್ರೀಯಾಪ್ರಕೃತಿಗಳು ಸ್ವಚ್ಚಂದವಾಗಿ ಬಳಕೆಯಾಗುತ್ತದೆ.

ಚಹ>ಚಾ, ಹೂವು>ಹೂ, ಸಿಹಿ>ಸೀ, ತರು>ತಾ, ಬರು>ಬಾ

ಮೈಸೂರು ಕನ್ನಡದಲ್ಲಿ ಏಕವಚನಕ್ಕೆ ಪ್ರತ್ಯೇಕಪ್ರತ್ಯಗಳಿಲ್ಲ. ನಾಮ ಪ್ರಕೃತಿಯಲ್ಲಿ ಸಹಜವಾಗಿ ಏಕವಚನ ಬಳಕೆಗೊಳ್ಳುತ್ತದೆ. ರು, ಅರು, ಏರು, ದಿರು, ದೀರು, ಂದ್ರು, ನ್ದಿರು, ಗಳು, ಗೊಳು, ಗೋಳು, ಗುಳು, ಕ್ಳು ಹೀಗೆ ಹಲವು ಬಹುವಚನ ಪ್ರತ್ಯಯಗಳಿವೆ.

ರು – ಬೇಡ್ರು, ವಡ್ಡರು, ಗೊಲ್ಲರು

ಈರು – ತಂಗೀರು, ಸವತೀರು, ಉಡಗೀರು

ಏರು – ಅತ್ತೇರು, ಸೊಸೇರು, ತಂಗೇರು

ದಿರು – ಅಣ್ಣಂದಿರು, ಅಕ್‌ದಿರು, ತಮ್ಮದಿರು

ದೀರು – ಅಕ್ಕಂದೀರು, ಅಣ್ಣಂದೀರು, ಸೊಸೆದೀರು

ಂದ್ರು – ಅಕ್ಕಂದ್ರು, ಅಣ್ಣಂದ್ರು, ತಮ್ಮಂದ್ರು

ನ್ದಿರು – ಅಣ್ದೀರು, ತಮ್ದೀರು

ಗ್ಳ – ಕುರಿಗ್ಳ, ಮರಗ್ಳ

ಗಳು – ಮರಗಳು, ಮನೆಗಳು, ಆನೆಗಳು

ಗುಳು – ಮರಗುಳು, ಮನೆಗುಳು, ಆನೆಗುಳು

ಗೋಳು – ಮರಗೋಳು ಕುರಿಗೋಳು ಆನೆಗೋಳು

ಕ್ಳು – ಮಕ್ಳು, ಐಕ್ಳು, ಹುಡ್ಳು

ಮೈಸೂರು ಕನ್ನಡದಲ್ಲಿ ಸರ್ವನಾಮಗಳಿವೆ. ಉತ್ತಮ ಪುರುಷ ಏಕವಚನ ನಾನು, ನಾ ಆಗುತ್ತದೆ. ಮಧ್ಯಪುರುಷ ಏಕವಚನ ನಾವು, ನಾಮು, ನಾವ್ ಆಗುತ್ತದೆ. ನೀನು, ನೀ ಬಹುವಚನದಲ್ಲಿ ನೀನು, ನೀಮು, ನೀವ್ ಎಂದಿದೆ. ಪ್ರಥಮ ಪುರುಷ ಪುಲ್ಲಿಂಗ ಸರ್ವನಾಮ ಏಕವಚನದಲ್ಲಿ ಅವನು, ಅವ್ನು, ಅವ ಬಹುವಚನದಲ್ಲಿ ಅವ್ರು, ಅವರು ಎಂದಾಗಿದೆ. ಸ್ತ್ರೀಲಿಂಗ ಏಕವಚನ ಅವ್ಳು, ಅವಳು, ಆಕೆ, ಆಕಿ, ಆಗಿದೆ. ನಪುಂಸಕ ಲಿಂಗದಲ್ಲಿ ಅದು, ಅವು, ಎಂಬ ಸರ್ವನಾಮಗಳಿವೆ. ಯಾವ್ನು, ಯಾರ, ಯಾವೊಂದು, ಯಾರು, ಯಾವ್ಳು, ಯಾವೊಳು, ಯಾವ್ದು, ಯಾವುದು ಎಂಬುವು ಪ್ರಶ್ನಾರ್ಥಕ ಸರ್ವನಾಮಗಳಾಗಿವೆ.

ಮೈಸೂರು ಕನ್ನಡದಲ್ಲಿ ಸಪ್ತಮಿ ವಿಭಕ್ತಿ ಪ್ರತ್ಯಯ ದ್ವಿತ್ವದ ಬದಲಾಗಿ ಸ್ವರ ದೀರ್ಘಗೊಳ್ಳುವುದು. ಗುರುವಿನಲ್ಲಿ>ಗೂರೂಲಿ, ಮನೆಯಲ್ಲಿ>ಮನೇಲಿ, ಕೆರೆಯಲ್ಲಿ>ಕೆರೇಲಿ, ಜಾತ್ರೆಯಲ್ಲಿ>ಜಾತ್ರೇಲಿ. ದ್ವಿತೀಯ ವಿಭಕ್ತಿ ಪ್ರತ್ಯಯ ಅನ್ನು ದೀರ್ಘವಾಗಿ ಬರುತ್ತದೆ.

ಕೊಡ್ಲಿಯನ್ನು ತಾ>ಕೊಡ್ಲಿ ತಾ, ಮರವನ್ನೇರು>ಮರವೇರು, ಮನೆಯನ್ನು ಕಟ್ಟು>ಮನೇಕಟ್ಟು, ಪುಸ್ತಕವನ್ನು ತಾ>ಪುಸ್ಸಕ ತಾ.

ಮೈಸೂರು ಕ್ನಡದಲ್ಲಿ ಎರಡು ರೀತಿಯ ಕಾಲ ಸೂಚಕ ಪ್ರತ್ಯಯಗಳಿವೆ. ಭೂತಕಾಲ ಸೂಚಕ ಪ್ರತ್ಯಯ ಮತ್ತು ಭೂತೇತರ ಕಾಲಸೂಚಕ ಪ್ರತ್ಯಯ. ವರ್ತಮಾನ ಮತ್ತು ಭವಿಷ್ಯತ್ ಕಾಲಕ್ಕೆ ಪ್ರತ್ಯೇಕ ಪ್ರತ್ಯಯಗಳಿಲ್ಲ. ಆದ್ದರಿಂದ ಇದನ್ನು ಭೂತೇತರ ಕಾಲವೆಂದು ಗುರುತಿಸಿಕೊಳ್ಳಬಹುದಾಗಿದೆ.

| ಭೂತಕಾಲ | ಭೂತೇತರ ಕಾಲ |
|---|---|
| ನೋಡ್ದೆ, ನೋಡ್ದೇವಿ | ನೋಡ್ತೀವಿ, ನೋಡುದ್ರೆ |
| ಮಾಡಿದಳು, ಮಾಡ್ತಾಳೆ | ಮಾಡ್ತಳೆ, ಮಾಡುತ್ತಾಳೆ |
| ಕೇಳ್ದೆ, | ಕೇಳ್ತೇನಿ, ಕೇಳ್ತೇನೆ |

ಮೈಸೂರು ಕನ್ನಡದಲ್ಲಿ ಕ್ರಿಯಾ ವಿಶೇಷಣಗಳಿವೆ. ಕ್ರಿಯಾಪದವನ್ನು ಅನುಸರಿಸಿ ಇವು ಬರುತ್ತವೆ. ಕೆಲವು ವೇಳೆ ನಾಮಪದವನ್ನು ಅನುಸರಿಸಿ ಬರುತ್ತವೆ. ಮ್ಯಾಲೆ, ಮೇಲೆ, ಬಲ್ಗಡೆ, ಇಷ್ಟು, ಈಸು, ಈಟು, ಯೆಲ್ಲಿ, ಅಂಗಾರೆ, ಇಂಗಾರೆ, ಅಂಗೆ, ತನಕ, ಯಾವತ್ತು ಇತ್ಯಾದಿ.

ಮೈಸೂರು ಕನ್ನಡದಲ್ಲಿ ಕೆಲವು ಪ್ರದೇಶಗಳಲ್ಲಿ ಒಂದೇ ಅರ್ಥಕೊಡುವ ಬೇರೆ ಬೇರೆ ಪದಗಳು ಬಳಕೆಯಲ್ಲಿವೆ.

ಈರುಳ್ಳಿ, ಈಳ್ಳಿ, ನೀರುಳ್ಳಿ, ಉಳ್ಳಾಗಡ್ಡೆ

ಬರ್ಲು, ಪರ್ಕಿ, ಕಸ್ಪರ್ಕೆ, ಹಿಡುಗ್ಲು, ಹಿಡ್ಲು

ಕಡಲೆಕಾಯಿ, ಕಡ್ಲೆಕಾಯಿ, ಕಳ್ಳೇಕಾಯಿ, ನೆಲಗಡಲೆಕಾಯಿ

ಬಿರ್ನೆ, ಬ್ಯಾಗ್ ಬ್ಯಾಗ, ಸರ್ನೆ, ಗಡ ಗಡ

ಆರಂಭ, ಒಕ್ಕಲತನ, ಬೇಸಾಯ

## ಧಾರವಾಡ ಕನ್ನಡ

ಧಾರವಾಡ ಕನ್ನಡ ಹಾವೇರಿ, ದಾವಣಗೆರೆ, ಗದಗ ಜಿಲ್ಲೆಗಳು ಹಾಗು ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಯ ಉತ್ತರ ಭಾಗದ ತಾಲ್ಲೋಕುಗಳು, ಬಳ್ಳಾರಿ ಜಿಲ್ಲೆಯ ಪಶ್ಚಿಮ ಭಾಗದ ತಾಲ್ಲೋಕುಗಳು ಮತ್ತು ದಕ್ಷಿಣ ಭಾಗಗಳ ತಾಲ್ಲೋಕು, ಬೆಳಗಾವಿ ಜಿಲ್ಲೆ, ಬಿಜಾಪುರ ಜಿಲ್ಲೆಯ ದಕ್ಷಿಣ ಭಾಗಗಳಲ್ಲಿ ಬಳಕೆಯಲ್ಲಿರುವ ಕನ್ನಡ ಭಾಷಾ ರೂಪಗಳನ್ನೆ ಧಾರವಾಡ

ಕನ್ನಡ ಎಂದು ಕರೆಯಲಾಗುತ್ತದೆ, ಧಾರವಾಡ, ಬೆಳಗಾವಿ, ಬಿಜಾಪುರ, ಪ್ರದೇಶಗಳು ಹಿಂದೆ ಮುಂಬೈ ಕರ್ನಾಟಕದ ಆಳ್ವಿಕೆಗೆ ಒಳಪಟ್ಟಿತ್ತು. ಹೀಗಾಗಿ ಧಾರವಾಡ ಕನ್ನಡದ ಮೇಲೆ ಮರಾಠಿ, ಕೊಂಕಣಿ, ಉರ್ದು ಭಾಷೆಗಳ ಪ್ರಭಾವವನ್ನು ಕಾಣಬಹುದು. ಆ ಭಾಷೆಯ ಪದಗಳನ್ನು ಸ್ವೀಕರಿಸಿರುವುದನ್ನು ಕಾಣಬಹುದು.

ಧಾರವಾಡ ಕನ್ನಡದಲ್ಲಿ ಉ ಕಾರಾಂತ ಪದಗಳೆಲ್ಲವೂ ಇ ಕಾರಾಂತವಾಗುತ್ತವೆ,

ಮನೆ>ಮನಿ, ಕೆರೆ>ಕೆರಿ, ಕುದುರೆ>ಕುದ್ರಿ, ಬೆಲೆ>ಬೆಲಿ, ಕೊಳೆ>ಕೊಳಿ, ತೆನೆ>ತೆನಿ, ಆನೆ>ಆನಿ

ಕೆಲವು ಶಬ್ದಗಳಲ್ಲಿ ಆ ಕಾರಾಂತವಾದ ನಾಮಪ್ರಕೃತಿಗಳಿವೆ.

ಗಾಣಿಗ್ಯಾ, ಬಣಜಿಗ್ಯಾ, ಬಡಿಗ್ಯಾ, ಯೋಗ್ಯಾ

ಬಹುವಚನಗಳಲ್ಲಿ ಗೂಳ, ರ್ ಎಂಬ ಪ್ರತ್ಯಗಳು ಬರುತ್ತವೆ. ಆದರೆ ಈ ರೂಪಗಳು ಅ ಕಾರಾಂತ ಪುಲ್ಲಿಂಗ, ಸ್ತ್ರೀಲಿಂಗಗಳಲ್ಲಿ ಮಾತ್ರ ಕಾಣಿಸಿಕೊಳ್ಳುತ್ತದೆ.

ಹುಡುಗ>ಹುಡುಗರು, ಜನ>ಜನರು, ಅಣ್ಣತಮ್ಮಗಳು>ಅಣ್ಣತಮಗೂಳು, ಅಕ್ಕಂದಿರು>ಅಕ್ಕಾರು

ಬಣಜಿಗ್ಯಾರು, ಬಡಿಗ್ಯಾರು, ಅಸಗೂಳು

ಉ ಕಾರಾಂತವಾದ ಸಂಸ್ಕೃತ ಶಬ್ದಗಳಿಗೆ ಧಾರವಾಡ ಕನ್ನಡದಲ್ಲಿ ಗುಳ ಪ್ರತ್ಯಯ ಹತ್ತುತ್ತದೆ.

ಗುರುಗಳು, ಅಧಿಕಾರಿಗಳು

ನಪುಂಸಕ ಲಿಂಗದಲ್ಲಿ ಶಬ್ದದ ಏಕವಚನ ರೂಪಗಳೇ ಬಹುವಚನವನ್ನು ಸೂಚಿಸುತ್ತದೆ.

ಗಿಳಿ ಹಾದ್ವು, ಆನಿ ಬಂದ್ವು

ಧಾರವಾಡ ಕನ್ನಡದಲಿ ಉ ಕಾರಾಂತವಾದ ನಾಮಪದಗಳು ಅ ಕಾರಾಂತವಾಗುತ್ತವೆ.

ಅದು>ಅದ, ಇವತ್ತು>ಇವತ್ತ, ಆಫೀಸು>ಆಫೀಸ, ಊರು>ಊರ, ಮುಳ್ಳು>ಮುಳ್ಳ

ಧಾರವಾಡ ಕನ್ನಡದಲ್ಲಿ ಏಕವಚನ ಸೂಚಿಸಲು ಪ್ರತ್ಯೇಕ ಪ್ರತ್ಯಯವಿಲ್ಲ. ಆದರೆ ಬಹುವಚನಕ್ಕೆ ಆರು, ರ್‍ರು, ದೇರ, ಕ್ಳ, ಗುಳು, ಗೊಳು ಎಂಬ ಹಲವು ಪ್ರತ್ಯಯಗಳಿವೆ.

ಅರು – ತಂಗ್ಯಾರು, ಅಕ್ಕಾರು, ಅಜ್ಜಾರು,

ರು – ಉಡುಗ್ರು, ಬೇಡ್ರು, ಸವತೀರು

ಓರ – ಉಡುಗೋರ, ಉಡುಗೊರ

ದೇರ – ಗಂಡದೇರ, ಅಣ್ಣದೇರ, ತಮ್ಮದೇರ

ಗಳು, ಗುಳು – ಅತ್ತಿಗಳು, ಅತ್ತಿಗುಳು, ಆಳುಗುಳು, ಆಳುಗಳು, ಗುರುಗುಳು, ಗುರುಗಳು

ಗೊಳ – ಅಣ್ಣಗೊಳ, ದನಗೊಳ, ಅಪ್ಪಗೊಳ, ಬಾವಿಗೊಳ

ಧಾರವಾಡ ಕನ್ನಡದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗ ವಿವಕ್ಷೆಯಿದೆ. ಕೆಲವು ವೇಳೆ ಪುಲ್ಲಿಂಗ, ಸ್ತ್ರೀಲಿಂಗಗಳು ವಿಕಲ್ಪವಾಗಿ ನಪುಂಸಕಲಿಂಗಗಳಾಗುತ್ತವೆ. ಈ ನಪುಂಸಕ ಲಿಂಗದಲ್ಲಿ ಬಹುವಚನ ಬಳಕೆಯಾಗುತ್ತದೆ. ಅಮ್ಮ ಬತ್ತ್–ಅಮ್ಮ ಬಂದಳು, ಅದ್ ಹೋತ್– ಅದು ಹೋಯಿತು, ಅವ ಮತ್ತ್ ಬತ್ತ್ – ಅವನು ಮತ್ತೆ ಬಂದ.

ಧಾರವಾಡ ಕನ್ನಡದಲ್ಲಿ ತೃತೀಯ ವಿಭಕ್ತಿ ಪ್ರತ್ಯಯ ಇಂದ ಮತ್ತು ಲಿ, ಲೆ ಪ್ರತ್ಯಗಳು ಬಳಕೆಯಲ್ಲಿವೆ. ಸಲ್ಕಿಲೆ, ಕೈಲೆ, ಮೈಲಿ, ಕೈಯಾಗೆ. ಷಷ್ಠಿ ವಿಭಕ್ತಿಗೆ ಅ, ಆ, ಈ, ಓ, ಎಂಬ ಪ್ರತ್ಯಯಗಳು ಬರುತ್ತವೆ. ಹುಡುಗಾನ, ಮಗಾನ, ಗುರುವಿನ, ಮಣ್ಣಿನಾ, ಕೆರೆಯಾ, ಆಡೋ ಆಟ, ವೋದೋ ಪುಸ್ತಕ, ಉಡೋನೇಗ್ಲು.. ಸಪ್ತಮಿ ವಿಭಕ್ತಿಗೆ ಆಣ್, ಆಗ, ವಳಗ, ಅಲ್ಲಿ ಎಂಬ ಪ್ರತ್ಯಯಗಳು ಬರುತ್ತವೆ. ಇವು ಕೆಲವು ವೇಳೆ ದೀರ್ಘವಾಗುವುದು ಉಂಟು. ತಲೆಯಾಗ್. ತೆಲೆವಳ್ಗೆ, ಹ್ವಲ್ದಾಗ್, ಮನಿಯಾಗ್, ಮಾತಲಿ, ಕೆರೆಲಿ, ಅಕ್ಕನಲಿ. ಸಂಭೋಧನಾ ವಿಭಕ್ತಿಗೆ ಪ್ರಕೃತಿಗಳ ಅಂತ್ಯಸ್ವರ ದೀರ್ಘವಾಗಿ ಪ್ರಯೋಗವಾಗಿವೆ. ಸಂಬಂಧ ವಾಚಕಗಳು ಸಂಭೋಧನೆಯಲ್ಲಿ ಯ ಕಾರವನ್ನು ಪಡೆಯುತ್ತವೆ. ರಾಮೋ, ರಾಮಾ –ರಾಮ್ಯಾ, ಭೀಮೋ, ಭೀಮಾ–ಭೀಮ್ಯಾ, ಅಕ್ಕಾ–ಯಕ್ಕಾ, ಅಣ್ಣಾ–ಯಣ್ಣಾ.

ಧಾರವಾಡ ಕನ್ನಡದಲ್ಲಿ ಸರ್ವನಾಮಗಳು ಮೈಸೂರು ಕನ್ನಡದಂತೆಯೇ ಇವೆ. ಕೆಲವು ಸಂಬಂಧವಾಚಕಗಳು ವಿಶೇಷವಾಗಿರುವುದನ್ನು ಧಾರವಾಡ ಕನ್ನಡದಲ್ಲಿ ಗುರುತಿಸಬಹುದು. ಅಮ್ಮ–ಅಬ್ಬೆ, ಅಯಿ, ಚಿಕ್ಕಪ್ಪ–ಚಗಪ್ಪ, ಕಾಕ, ಮಾಂಸಿ, ಚಿಕ್ಕವ್ವ–ಚಿಗವ್ವ, ಕಾಕಿ, ವೈನಿ–ಅತ್ತಿಗೆ, ಮಾಂವ–ಮಾವ

ಧಾರವಾಡ ಕನ್ನಡದಲ್ಲಿ ಸಂಖ್ಯಾವಾಚಕಗಳು ವಿಶೇಷವಾಗಿದ್ದು ಈ ಸಂಖ್ಯಾವಾಚಕಗಳ ಮೇಲೆ ಮರಾಠಿ ಪ್ರಭಾವವನ್ನು ಕಾಣಬಹುದು. ದೀಡ್–ಒಂದೂವರೆ, ಅಡೀಚ್–ಎರಡೂವರೆ, ತೀರ್ಸ– ಮೂರನೇ, ಪೂಸೀ–ಮುಕ್ಕಾಲು, ಪನ್ನಾಸ್–ಐವತ್ತು, ಬಾರ–ಹನ್ನೆರಡು, ಶಂಬೂರ–ಶಂಬರ–ನೂರು, ಪಂಚಾಮೀಸ್–ಇಪ್ಪತ್ತೈದು, ಹಜಾರ್–ಸಾವಿರ.

ಧಾರವಾಡ ಕನ್ನಡದಲ್ಲಿ ಸ್ಥಳ, ಪರಿಮಾಣವಾಚಕ, ರೀತಿ ಮುಂತಾದವುಗಳಿಗೆ ಸಂಬಂಧಿಸಿದ ಪದಗಳ ಆದಿಯ ಸ್ವರದ ಸ್ಥಾನದಲ್ಲಿ ಕ ಕಾರ ಬರುತ್ತದೆ. ಸಂಬಂಧವಾಚಕಗಳು ಅವುಗಳ ಆದಿಯಲ್ಲಿ ಯ ಕಾರವನ್ನು ಪಡೆಯುತ್ತವೆ.

ಸ್ಥಳವಾಚಕಗಳು – ಅಲ್ಲಿ>ಕಲ್ಲಿ, ಇಲ್ಲಿ>ಕಿಲ್ಲಿ, ಯೆಲ್ಲಿ>ಎಲ್ಲಿ, ಯಾಕಾಡಿ>ಕೀಕಾಡಿ, ಆಕಡಿ>ಆಕಾಡಿ>ಕಾಕಾಡಿ, ಇಕಡಿ>ಈಕಡಿ>ಕೀಕಾಡಿ

ಪರಿಮಾಣವಾಚಕಗಳು – ಅಸ್ಪ>ಕಸ್ಪ, ಅಟ್>ಕಾಟ್, ಈಟ್>ಕೀಟ್, ಹ್ಯಾಂಗ್>ಕಾಂಗ್, ಹಿಂಗ್>ಕಿಂಗ್

ಯ ಕಾರಕ್ಕೆ – ಯಪ್ಪಾ>ಯಪ, ಯವ್ವಾ>ಯವ, ಯಮ್ಮ, ಅಬೆ>ಯಬೆ, ಯಾಕಬೆ,

ಕೆಲವು ಸರ್ವನಾಮಗಳು ಧಾರವಾಡ ಕನ್ನಡದಲ್ಲಿ ಕ ಕಾರವನ್ನು ಪಡೆಯುತ್ತವೆ. ಅಂವ್>ಕಾಂವ್, ಇಂವ್>ಕಿಂವ್, ಇಕಿ>ಕಿಕಿ, ಅವ್>ಕವ್, ಇದ್>ಕಿದ್, ಅವ್ರ>ಕಾವ್ರ, ಅವ>ಕವ, ಇವ್ರ>ಕಿವ್ರ

ಧಾರವಾಡ ಕನ್ನಡದಲ್ಲಿ ಕಾಲಸೂಚಕ ಪ್ರತ್ಯಯಗಳನ್ನು ಭೂತಕಾಲ ಮತ್ತು ಭೂತೇತರ ಕಾಲ ಸೂಚಕ ಪ್ರತ್ಯಯಗಳೆಂದು ವರ್ಗೀಕರಿಸಬಹುದು. ವರ್ತಮಾನ ಮತ್ತು ಭವಿಷ್ಯತ್ ಕಾಲಗಳಲ್ಲಿ ಒಂದೆ ಪ್ರತ್ಯಯ ಅಲ್ಪ ಬದಲಾವಣೆಯೊಂದಿಗೆ ಬಳಕೆಯಾಗುತ್ತದೆ.

ಭೂತಕಾಲಕ್ಕೆ ದ್, ಇದ್, ತ್, ನ್ದ, ಎಂಬ ಪ್ರತ್ಯಯಗಳು ಬರುತ್ತವೆ.

ದ್– ಬಿದ್ದ, ಇದ್ದ, ತಿಂದ, ಆದ

ಇದ್– ಮೂಡ್ದ, ನೋಡ್ದ, ಕೇಳ್ದ, ಹೇಳ್ದ

ತ್– ಅತ್ತ, ಕಿತ್ತ, ಸತ್ತ, ಹೊತ್ತ

ಟ್– ಸುಟ್ಟ, ಕೊಟ್ಟ, ನೆಟ್ಟ

ನ್ದ– ತಂದ, ಬಂದ, ಕೊಂದ, ಕ್ವಂದ

ಭೂತೇತರ ಕಾಲದಲ್ಲಿ ತ್ ಪ್ರತ್ಯಯವೇ ವರ್ತಮಾನ ಮತ್ತು ಭವಿಷ್ಯತ್ ಕಾಲದಲ್ಲಿ ಬಳಕೆಯಾಗುತ್ತದೆ.

| ವರ್ತಮಾನಕಾಲ | ಭವಿಷ್ಯತ್‌ಕಾಲ |
|---|---|
| ಮಾಡ್ತೀನಿ | ಮಾಡ್ತೀನಿ |
| ಹೋಗ್ತಾನ | ಹೋಗ್‌ತ್ತು |
| ಹೊಕ್ಕಾಳ್ | ಹೊಕ್ಕಲೆ |
| ಹೋಗ್ತಾವ್ | ಹೋಗ್ತಲೆ, ಹೋಗ್‌ತೈತಿ |

ಧಾರವಾಡ ಕನ್ನಡದಲ್ಲಿ ಅಸು, ಅಸ ಎಂಬ ಪ್ರತ್ಯಯಗಳು ಕ್ರಿಯಾಧಾತುಗಳಿಗೆ ಸೇರುವುದರಿಂದ ಪ್ರೇರಣಾರ್ಥಕ ಕ್ರಿಯಾರೂಪಗಳು ಲಭಿಸುತ್ತವೆ. ಉಣಾಸು, ನಿಂದ್ರಿಸು, ಕುಡ್ಸು, ಹೋಗಾಸು, ಇತ್ಯಾದಿ. ಅಕ, ಅಕ್ಕ ಪ್ರತ್ಯಯಗಳು ಸೇರುವುದರಿಂದ ಅಪರಿಮಿತ ಕ್ರಿಯಾರೂಪಗಳು ದೊರೆಯುತ್ತವೆ. ಮಾಡ್ಲಿಕ, ಮಾಡಾಕ, ಬರ್ಲಿಕ, ಬರಾಕ, ಬರಲಾಕ್ಕ. ಲಿ ಅಥವಾ ಳ ಪ್ರತ್ಯಯಗಳು ಕ್ರಿಯಾಧಾತುವಿಗೆ ಸೇರಿದಾಗ ವಿದ್ಯರ್ಥ ಕ್ರಿಯಾ ರೂಪಗಳು

ಲಭಿಸುತ್ತವೆ. ಮಾಡ್ಲಿ, ಮಾಡ್ಳಿ, ನಿಂದ್ರಲಿ, ನಿಂದ್ರಿ, ಹೇಳ್ಲಿ, ಹೇಳ್ಳಿ. ರ್ ಪ್ರತ್ಯಯವು ಕ್ರಿಯಾಧಾತುಗಳಿಗೆ ಸೇರುವುದರಿಂದ ಅಪೇಕ್ಷಣಾರ್ಥ ಕ್ರಿಯಾ ರೂಪಗಳು ಸಿದ್ಧಿಸುತ್ತವೆ. ಬಂದ್ರ, ನಿಂದ್ರ, ಕೇಳಿದ್ರೇ, ತಂದ್ರ, ತಿಂದ್ರ, ಗೆದ್ದಿರೇ ಇತ್ಯಾದಿ.

ಧಾರವಾಡ ಕನ್ನಡದಲ್ಲಿ ಸಂಸ್ಕೃತ ಪದಗಳ ಉಚ್ಚಾರಣೆ ಭಿನ್ನವಾಗಿರುತ್ತದೆ.

ಸಂಸಾರ>ಸರ್ಮ್‌ಸಾರ, ಸಿಂಹ>ಸಿಮ್ಮ

ಇಲ್ಲಿ ಬಳಕೆಯಲ್ಲಿರು ಇಂಗ್ಲೀಷ್ ಶಬ್ದಗಳ ಉಚ್ಚಾರಣೆಯು ವಿಶೇಷವಾಗಿದೆ.

ರೈಲು>ರೇಲು, ಜಡ್ಜ್>ಜಜ್, ರಿಜಿಸ್ಟ್ರಾರ್>ರಜಿಸ್ಟ್ರಾರ್, ಬಸ್ಸು>ಬಸ್ಸ, ಕಾರ್>ಕಾರ

ಧಾರವಾಡ ಕನ್ನಡದಲ್ಲಿ ಕೆಲವು ಅವ್ಯಯಗಳು ಬಳಕೆಯಲ್ಲಿವೆ. ಇವು ವಾಕ್ಯರಚನೆಯಲ್ಲಿ ಕೆಲ ಸಂದರ್ಭಗಳಲ್ಲಿ ಯಾವ ಬಗೆಯ ಪ್ರತ್ಯಯವನ್ನು ಪಡೆಯುವುದಿಲ್ಲ.

ಅತ್ಲಾಗ, ಅಂತು, ಹಂತೇಕ, ಏಕದಂಕಿಲೆ, ಇಂತು, ಸುಮ್ನ, ಯೆತ್ಲಾಗ್,

ಧಾರವಾಡ ಕನ್ನಡಕ್ಕೆ ವಿಶೇಷ ಎನಿಸುವ ಕೆಲವು ಶಬ್ದಗಳು ಬಳಕೆಯಲ್ಲಿವೆ.

ಕೆರ-ಚಪ್ಪಲಿ, ಉಪ್ಲ (ಉಸಿರು), ತ್ಯಂಬ್ಗಿ, ಚರಿಗಿ, ಮಂದಿ, ಅರಿವಿ, ಹರಾಸ್(ಸೋಲು), ಬಿಡಾಸ್(ಪೀಡಿಸು), ಆಯಂತ(ತಿಂದಿತು), ಅವಭೀ(ಅವನು ಸಹ), ಪ್ಯಾಲಿ(ಪೆದ್ದು), ಪಟಗಾ(ರುಮಾಲು), ಲಗೀನ(ಬೇಗ), ಸಾಪ್(ನೇರ), ಅಂಬ್ರ(ಸಾರು) ಇತ್ಯಾದಿ.

## ಗುಲ್ಬರ್ಗಾ ಕನ್ನಡ

ಬೀದರ್, ಗುಲ್ಬರ್ಗಾ, ಬಾಗಲಕೋಟೆ, ರಾಯಚೂರು ಜಿಲ್ಲೆಗಳ ಕನ್ನಡವನ್ನು ಗುಲ್ಬರ್ಗಾ ಕನ್ನಡವೆಂದು ಕರೆಯಲಾಗುತ್ತದೆ. ಈ ಭಾಷಾರೂಪಗಳು ಸೀಮಿತವಾದವು. ಗುಲ್ಬರ್ಗಾ ಕನ್ನಡ ಪ್ರಮಾಣ ಭಾಷೆಗೆ ದೂರದಲ್ಲಿದೆ. ಗುಲ್ಬರ್ಗಾ ಕನ್ನಡದ ಮೇಲೆ ಮರಾಠಿ, ತೆಲುಗು, ಉರ್ದು, ಭಾಷೆಗಳ ಪ್ರಭಾವವು ಹೆಚ್ಚಾಗಿದೆ. ಪ್ರಾಚೀನ ಕಾಲದಲ್ಲಿ ಇದೇ ತಿರುಳಗನ್ನಡ ಪ್ರದೇಶವಾಗಿತ್ತು. ಈ ಪ್ರದೇಶಗಳು ಮಹಮದೀಯರು ಮತ್ತು ಮರಾಠರ ಆಳ್ವಿಕೆಗೆ ಒಳಪಟ್ಟಾಗ ಉರ್ದು, ಮರಾಠಿ, ತೆಲುಗು ಭಾಷೆಗಳು ಆಡಳಿತ ಭಾಷೆಯಾಗಿದ್ದರಿಂದ ಅದರ ಪ್ರಭಾವವನ್ನು ಈ ಉಪಭಾಷೆಯಲ್ಲಿ ಗುರುತಿಸಬಹುದು.

ಗುಲ್ಬರ್ಗಾ ಕನ್ನಡ ಸಾಹಿತ್ಯಕವಾಗಿ, ಐತಿಹಾಸಿಕವಾಗಿ ಮಹತ್ವದ ಭಾಷೆಯಾಗಿತ್ತೆಂಬುದನ್ನು ಕವಿರಾಜಮಾರ್ಗಕಾರ ಗುರುತಿಸುತ್ತಾನೆ. ಈತ ಹೇಳುವ ಕಿಸುವೊಳಲು, ಮಹಾಕೋಪಣ, ಪುಲಿಗೆರೆ, ಒಕ್ಕುಂದದ ನಡುವಣ ಪ್ರದೇಶ ಇದೆ. ಹಾಗೂ ಪಂಪ ಕವಿ ಹೇಳುವ ಪುಲಿಗೆರೆಯ ಕನ್ನಡದ ಪ್ರದೇಶವು ಇದೇ ಆಗಿದೆ. 12ನೇ ಶತಮಾನದ

ಹೊತ್ತಿಗೆ ವೈಭವಯುತವಾಗಿ ಮೆರೆದ ಈ ಭಾಷೆ ನಂತರದಲ್ಲಿ ಮುಸ್ಲಿಂ ದಾಳಿಗೆ ತುತ್ತಾಗಿ ಅವರ ಆಡಳಿತಕ್ಕೆ ಒಳಪಟ್ಟಿತ್ತು. ಇದರಿಂದಾಗಿ ಉರ್ದು ಆಡಳಿತ ಭಾಷೆಯಾಗಿ ಜಾರಿಗೆ ಬಂದಿತು. ವಿಜಯನಗರದ ಅರಸರ ಆಡಳಿತ ಅವಧಿಯಲ್ಲಿ ಕನ್ನಡ ಚೈತನ್ಯವನ್ನು ಪಡೆದುಕೊಂಡಿತು. ಆದರೂ ಬೀದರ್, ಬಿಜಾಪುರಗಳು ಬಹುಮನಿ ಸುಲ್ತಾನರ ರಾಜಧಾನಿಗಳಾಗಿದ್ದವು. ಇದರಿಂದಾಗಿ ಗುಲ್ಬರ್ಗಾ ಕನ್ನಡದ ಮೇಲೆ ಪಾರ್ಸಿ, ಉರ್ದು ಭಾಷೆಗಳ ಪ್ರಭಾವವೂ ಆಯಿತು ಪರಿಣಾಮವಾಗಿ ಕನ್ನಡದ ಊರುಗಳ ಹೆಸರು ಉರ್ದುವಾಗಿ ಬದಲಾವಣೆಗೊಂಡವು. ಉದಾ: ಪಾಲ್ಮೂರು>ಮಹಬೂಬ್ ನಗರ, ಇಂದೂರು>ನಿಜಾಮಬಾದ್, ಗುಲ್ಬರ್ಗಾದ ಮೂಲ ಕನ್ನಡದ ಹೆಸರು ಕಲುಬುರುಗೆ. ಇತ್ಯಾದಿ. ಗುಲ್ಬರ್ಗಾದ ಪ್ರದೇಶಗಳು ಅನ್ಯರ ಆಡಳಿತಕ್ಕೆ ಪರಿಣಾಮವಾಗಿ ಭಾಷಿಕ ರೂಪಗಳನ್ನು ಪಡೆದುಕೊಂಡಿತು. ಗುಲ್ಬರ್ಗಾದ ಕನ್ನಡದ ಒಳಗೆಯೇ ಬೀದರ್ ಕನ್ನಡ, ರಾಯಚೂರು ಕನ್ನಡ, ಬಾಗಲಕೋಟೆ ಕನ್ನಡ, ಕೊಪ್ಪಳ ಕನ್ನಡ ಎಂದು ವರ್ಗೀಕರಿಸಬಹುದು. ಈ ಒಳ ಪ್ರಭೇದಗಳು ಒಂದನೊಂದು ಹೋಲುತ್ತದೆಯಾದ ಕಾರಣ ಇವನ್ನು ಗುಲ್ಬರ್ಗಾ ಕನ್ನಡವೆಂದು ಪ್ರಾದೇಶಿಕ ಉಪಭಾಷೆಯಾಗಿ ಸ್ಥೂಲವಾಗಿ ಗುರುತಿಸಬಹುದು.

ಗುಲ್ಬಗಾ ಕನ್ನಡದಲ್ಲಿ ಹದಿನಾಲ್ಕು ಸ್ವರ ಧ್ವನಿಮಾಗಳಿವೆ. ಇವುಗಳಲ್ಲಿ ಐದು ಹ್ರಸ್ವ ಸ್ವರ ಧ್ವನಿಮಾಗಳು, ಐದು ದೀರ್ಘ ಸ್ವರ ಧ್ವನಿಮಾಗಳು ಸೇರಿವೆ. ಇಲ್ಲಿ ಹತ್ತು ಸ್ವರ ಧ್ವನಿಗಳು ಪ್ರಧಾನವಾದವು ಉಳಿದ ನಾಲ್ಕು ಧ್ವನಿಮಾಗಳು ಗೌನವಾದವು. ಋ, ೠ , ಐ, ಔ, ಅಂ, ಅಃ ಇವು ಸಹಜವಾಗಿ ಬಳಕೆಯಲ್ಲಿಲ್ಲ. ವಿದ್ಯಾವಂತರು ಮತ್ತು ಬ್ರಾಹ್ಮಣರ ಕನ್ನಡ ಆಡುಮಾತಿನಲ್ಲಿ ಮಾತ್ರ ಉಳಿದುಕೊಂಡಿವೆ. ಇಪ್ಪತ್ತೈದು ವ್ಯಂಜನ ಧ್ವನಿಮಾಗಳು ಸಹಜವಾಗಿವೆ. ಫ಼, ಖ, ಝ, ಎಂಬ ವ್ಯಂಜನಗಳು ಹೊಸದಾಗಿ ಸೇರಿವೆ. ಸ, ಶ ಸ್ವತಂತ್ರ ಧ್ವನಿಮಾಗಳಾಗಿ ಬಳಕೆಗೊಂಡಿವೆ. ಷ ಕಾರ ಸ ಕಾರದಲ್ಲಿ ಐಕ್ಯವಾಗುತ್ತದೆ. ಮಹಾಪ್ರಾಣಗಳು ಸಹಜವಾಗಿ ಇಲ್ಲ ಇದ್ದರೂ ಉರ್ದು ಮರಾಠಿಗಳ ಪ್ರಭಾವ ಮತ್ತು ಉಚ್ಚಾರದ ಒತ್ತಡದಿಂದ ಮಾತ್ರ ಕಾಣಿಸಿಕೊಳ್ಳುತ್ತದೆ.

ಕೆಲವು ನಾಮಪದಗಳ ಎ ಕಾರಾಂತ ಶಬ್ದಗಳು ಗುಲ್ಬರ್ಗಾ ಕನ್ನಡದಲ್ಲಿ ಕೆಲವು ವೇಳೆ ಇ ಕಾರಾಂತವಾಗುತ್ತದೆ.

ಕುದ್ರೆ>ಕುದ್ರಿ, ಉಣ್ಣೆ>ಉಣ್ಣಿ, ಕೆರೆ>ಕೆರಿ, ಕಟ್ಟೆ>ಕಟ್ಟಿ, ಶಾಲೆ>ಶಾಲಿ, ಕೋಟೆ>ಕ್ವಾಟಿ

ಕೆಲವು ಶಬ್ದಗಳ ಆದಿ ಮತ್ತು ನಡುವಿನ ಎ ಏ ಕಾರಗಳು ಯ ಕಾರವನ್ನು ಪಡೆಯುತ್ತದೆ.

ಎಲೆ>ಯೆಲೆ, ಎದಿ>ಯೆದಿ, ಎಮ್ಮಿ>ಯಮ್ಮಿ, ಬ್ಯಾನೆ>ಬೇನೆ, ಬೇಸಗೆ>ಬ್ಯಾಸ್ಗಿ, ಬೇಟೆ>ಬ್ಯಾಟಿ

ಕೆಲವು ಶಬ್ದಗಳ ಉ ಕಾರವು ಅ ಕಾರಾಂತವಾಗುತ್ತದೆ.

ಬಾಗಿಲು>ಬಾಗ್ಲ, ಇವತ್ತು>ಇವತ್ತ, ಮೀನು>ಮೀನ, ಹಲ್ಲು>ಹಲ್ಲ, ಕಲ್ಲು>ಕಲ್ಲ

ಕೆಲವು ಶಬ್ದಗಳ ಆದಿ ಮತ್ತು ನಡುವಿನ ಒ ಓ ಕಾರಗಳು ವ ಕಾರವನ್ನು ಪಡೆಯುತ್ತವೆ.

ಒಲೆ>ವಲಿ, ಒಬ್ಬ>ವಬ್ಬ, ಕೋಣ>ಕ್ವಾಣ, ಗೋಡೆ>ಗ್ವಾಡಿ, ಒಂದ>ವೊಂದ

ಕೆಲವು ಶಬ್ದಗಳ ಹ ಕಾರ ಶೂನ್ಯವಾಗಿ ಸ್ವರ ಧ್ವನಿಗಳು ಬರುತ್ತವೆ.

ಹೇಳು>ಏಳು, ಹಲ್ಲಿ>ಅಲ್ಲಿ, ಹೋದ>ವಾದ, ಹಾಳು>ಆಳು

ಗುಲ್ಬರ್ಗಾ ಕನ್ನಡದಲ್ಲಿ ಕೆಲವರ ಉಚ್ಚಾರಣೆಯ ಒತ್ತಡದಿಂದಾಗಿ ಕೆಲವು ಸಲ ಮಹಾಪ್ರಾಣಗಳು ಕಾಣಿಸಿಕೊಳ್ಳುತ್ತವೆ.

ಬಂಗಾರ>ಭಂಗಾರ, ಕೊಡೆ>ಖೊಡೆ, ತಿನ್ನು>ಥಿನ್ನು, ಕಿಡಕಿ>ಖಿಟಕಿ, ಕಿಂಡಿ>ಖಿಂಡಿ, ದೊಡ್ಡ>ಧೊಡ್ಡ

ಕೆಲವು ಶಬ್ದಗಳ ಚ ಕಾರವು ಸ ಕಾರವಾಗುತ್ತವೆ.

ಮುಚ್ಚಳ>ಮುಸ್ಸಳ, ಚಳಿ>ಸಳಿ, ಚಂಜಿ>ಸಂಜಿ

ಕೆಲವು ಶಬ್ದಗಳ ನಡುವಿನ ಸ್ವರ ಲೋಪವಾಗುತ್ತದೆ.

ಗಡಿಗೆ>ಗಡ್ಗಿ, ತಿಂಗಳು>ತಿಂಗಳ, ಕಟ್ಟಿಗೆ>ಕಟ್ಗಿ, ಮಡಿಕೆ>ಮಡ್ಕಿ, ಅಡಿಗೆ>ಅಡ್ಗಿ, ಕೊಡಲಿ>ಕೊಡ್ಲಿ

ಕೆಲವು ನಿರ್ದೇಶಾತ್ಮಕ ಸರ್ವನಾಮಗಳು ಕ ಕಾರವನ್ನು ಪಡೆಯುತ್ತದೆ.

ಅವ>ಕವ, ಅಲ್ಲಿ>ಕಲ್ಲಿ, ಆಕಡಿ>ಕಾಕಡಿ, ಇದು>ಕಿದು, ಇಲ್ಲಿ>ಕಿಲ್ಲಿ, ಇವ>ಕಿವ

ಗುಲ್ಬರ್ಗಾ ಕನ್ನಡದಲ್ಲಿ ವಿಶೇಷ ಜ಼ ಕಾರ ಅರಬ್ಬಿ, ಉರ್ದು ಶಬ್ದಗಳ ಪ್ರಭಾವದಿಂದ ಬಳಕೆಯಲ್ಲಿದೆ.

ಬೀಜ಼, ಬಜ಼ಾರ್, ಖಜ಼ೂರ, ಹಜ಼ಾರ್

ಗುಲ್ಬರ್ಗಾ ಕನ್ನಡದಲ್ಲಿ ಫ಼ ಮತ್ತು ಖ ಧ್ವನಿಗಳು ಬಳಕೆಯಲ್ಲಿವೆ.

ಪಾಯಿದೆ>ಫ಼ಾಯ್ದೆ, ಸಿರ್ಫ಼ [ವಿನಹ], ದವಾಖಾನೆ [ಆಸ್ಪತ್ರೆ], ದುಖಾನ್ [ಅಂಗಡಿ],

ಕೆಲವು ಶಬ್ದಗಳಲ್ಲಿ ಅಂತ್ಯಾಕ್ಷರವೂ ಲೋಪವಾಗುತ್ತದೆ.

ಎಲುಬು – ಎಲುವು, ಎಲು, ಯೆಲು

ಅಡವಿ–ಅಡ್ವಿ,

ಸಲಹು–ಸಲವು, ಸಲ್

ಕೆಲವು ಶಬ್ದಗಳಲ್ಲಿ ವಿಜಾತೀಯ ಒತ್ತಕ್ಷರಗಳು ಸಜಾತೀಯ ಒತ್ತಕ್ಷರಗಳಾಗುತ್ತವೆ.

ಮುಸ್ಟಿ>ಮುಟ್ಟಿ, ಕುರ್ಡಿ>ಕುಡ್ಡಿ, ಯೆರ್ಡು>ಯೆಡ್ಡು, ನೆನ್ಪು>ನೆಪ್ಪು, ಕರ್ಡಿ>ಕಡ್ಡಿ [ಕರಡಿ]

ಕೆಲವು ಶಬ್ದಗಳಲ್ಲಿ ಅ ಕಾರಾದಿಯಾದ ಸಂಬಂಧವಾಚಕಗಳು ಯ ಕಾರದಿಂದ ಕೆಲವು ವೇಳೆ ಆರಂಭವಾಗುತ್ತದೆ.

ಅಣ್ಣ>ಯಣ್ಣ, ಅಪ್ಪ>ಯಪ್ಪ, ಅಕ್ಕ>ಯಕ್ಕ, ಅತ್ತೆ>ಯತ್ತೆ, ಅಜ್ಜ>ಯಜ್ಜ

ಗುಲ್ಬರ್ಗಾ ಕನ್ನಡದಲ್ಲಿ ನಾಮಪ್ರಕೃತಿಗಳೇ ಏಕವಚನಗಳ ಕಾರ್ಯವನ್ನು ನಿರ್ವಹಿಸುತ್ತದೆ. ಬಹುವಚನಕ್ಕೆ ರು, ರ, ವೆರು, ದಿರು, ಅಂದ್ರು, ಕ್ಳ, ಗೊಳ, ಗೋಳು ಎಂಬ ಬೇರೆ ಬೇರೆ ಪ್ರತ್ಯಗಳಿವೆ.

ರು – ನಂಟ್ರು, ಹುಡುಗ್ರು, ನಂಟ್ರ

ದೆರು–ದಿರು–ಅಂದ್ರು–ಅಂದ್ರ –– ಅಣ್ಣದೆರು, ಅಣ್‌ದಿರು, ಅಕ್ಕಂದ್ರು, ಅಕ್ಕಂದ್ರ, ಅತ್ತೆರು, ಅತ್ತ್ಯಾರು

ಗೂಳು–ಗೊಳು–ಗೋಳು –– ನಾಯಿಗೊಳ, ನಾಯಿಗುಳು, ಬಾವಿಗೊಳು, ಬಾವಿಗುಳು, ಸ್ವಾಮಿಗೊಳ್, ಮಂತ್ರಿಗೊಳ್, ಗುರುಗೊಳ್, ಗಿಡಗೊಳ್,

ಗುಲ್ಬರ್ಗಾ ಕನ್ನಡದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗಗಳಿವೆ. ಸ್ತ್ರೀಲಿಂಗ ಕೆಲವು ವೇಳೆ ನಪುಂಸಕ ಲಿಂಗದಲ್ಲಿ ಐಕ್ಯವಾಗುತ್ತದೆ. ಇಲ್ಲಿ ವಿಭಕ್ತಿ ಪಲ್ಲಟ ಸಾಮಾನ್ಯವಾಗಿದೆ. ದ್ವಿತೀಯ ವಿಭಕ್ತಿ 'ಅನ್ನು' ವಿಗೆ ಬದಲಾಗಿ ಚತುರ್ಥಿ ವಿಭಕ್ತಿ ಬರುತ್ತದೆ. ದ್ವಿತೀಯ ವಿಭಕ್ತಿಯಲ್ಲಿ ಗ, ಗ್, ಕ್ ಪ್ರತ್ಯಗಳು ಬರುತ್ತವೆ. ನಾಯೀಗ್, ನಾಯಿಗ, ಅವನ್ಗ–ಅವನ್ಕ, ಬಾಯಿಗ್, ಬಾಯಿಗ. ಪಂಚಮಿಯಾರ್ಥದಲ್ಲಿ ತೃತಿಯೆಯೇ ಬಳಕೆಯಾಗಿದೆ. ಚಾಕ್‌ನಿಂದ, ಹ್ವಲದಿಂದ, ದುಖಾನ್‌ದಿಂದ ಕೈಲೆ, ಕೈಲಿ, ಕಲ್ಲಿಂದ, ಮುಗಿಲಿಂದ. ಷಷ್ಠಿ ವಿಭಕ್ತಿಗೆ ಅರ್, ಅನ್, ಇನ್, ಅ, ಎಂಬ ಪ್ರತ್ಯಯಗಳು ಬಳಕೆಯಲ್ಲಿವೆ. ಇವು ಕೆಲವು ವೇಳೆ ವಿಕಲ್ಪವಾಗಿಯೂ ಬಳಕೆಯಲ್ಲಿದೆ. ತಾಮ್ರದ್, ಗಿಡದ್, ತಮ್ಮನ್, ಅಣ್ಣನ್. ಸಪ್ತಮಿ ವಿಭಕ್ತಿಯಲ್ಲಿ ಆಗ ಎಂಬ ಪ್ರತ್ಯಯವಿದ. ಇದು ಕೆಲವು ವೇಳೆ ದ್ವಿತೀಯಾ ವಿಭಕ್ತಿ ಕೆಲಸವನ್ನು ಮಾಡುತ್ತದೆ. ಅದರಲ್ಲಿ, ಅದರಾಗ, ಇದರಾಗ, ಮನಿಯಾಗ, ನಿರ್‍ನಾಗ, ಕೆರೆಯಾಗ.

ಗುಲ್ಬರ್ಗಾ ಕನ್ನಡದಲ್ಲಿ ಸಂಖ್ಯಾವಾಚಕಗಳು ಮರಾಠಿ ಪ್ರಭಾವಕ್ಕೆ ಒಳಗಾಗಿವೆ. ಯೆಡ್ಡು [ಎರಡು], ದಾ–ದಹ– [ಹತ್ತು], ಶಂಬರ್ [ನೂರು], ದೂರ್ಸ [ಎರಡನೆ], ಲಾಭ [ಒಂದು], ಹುಲಿಗ್ಯ [ಹೆಚ್ಚಲಿ].

ಗುಲ್ಬರ್ಗಾ ಕನ್ನಡದಲ್ಲಿ ಭೂತಕಾಲಕ್ಕೆ ದ್, ಡ್, ಟ್, ತ್ ಪ್ರತ್ಯಯಗಳಿವೆ. ವರ್ತಮಾನ ಭವಿಷ್ಯತ್ ಕಾಲಕ್ಕೆ ಒಂದೇ ಪ್ರತ್ಯಯವಿದೆ.

ಭೂತಕಾಲ ಭೂತೇತರಕಾಲ

| | ವರ್ತಮಾನ ಕಾಲ | ಭವಿಷ್ಯತ್ ಕಾಲ |
|---|---|---|
| ತಿಂದ | ಬರ್ತನ | ಬರ್ತಾನ |
| ಕಟ್ಟಿದ | ಕಟ್ತನ | ಕಟ್ತಾನ |
| ತಿಂತು | ತಿಂತ | ತಿಂತಾ |
| ಕುಡಿತು | ಕುಡ್ತೀನಿ | ಕುಡ್ತನಿ |
| ಬಂದದ | ಬರ್ತಿನಿ | ಬರ್ತಾನಿ |

ಗುಲ್ಬರ್ಗಾ ಕನ್ನಡದಲ್ಲಿದಲ್ಲಿ ಕುಡ್ಸು , ಮಾಡ್ಸು, ನೋಡ್ಸು, ಕೇಳ್ಸು ತರ್ಸು ಮೊದಲಾದ ಇಸು ಪ್ರತ್ಯಯಸೇರಿದ ಪ್ರೇರಣಾರ್ಥಕ ಪ್ರತ್ಯಗಳಿವೆ. ಆಜ್ಞಾರ್ಥಕ ಕ್ರಿಯಾರೂಪಗಳು ನೋಡು, ನೋಡ್ರಿ, ಕೇಳು,ಕೇಳ್ರಿ, ಕುಡಿ, ಕುಡ್ರಿ ಇತ್ಯಾದಿ ಆಗಿವೆ. ಓನು, ಓಣು, ಊಮು, ಅಮು ಎಂಬ ಪ್ರತ್ಯಗಳು ಸೇರುವುದರಿಂದ ಹ್ವಾಗಮು, ಕೊಡೋಣು, ಮಾಡೋನು, ಬರೂನು, ಬರೋಣು ಇತ್ಯಾದಿ ಇಚ್ಚಾರ್ಥಕ ಕ್ರಿಯಾರೂಪಗಳಿವೆ. ಉಂಡ್ರಪ್ಲೆ [ಉಂಡಮೇಲೆ], ಹೋದಮೇಲೆ [ಹ್ವಾದಪ್ಲೆ], ನೋಡ್ದಪ್ಲೆ [ನೋಡಿದ ಮೇಲೆ] ಎಂಬ ಕ್ರೀಯಾರೂಪಗಳು ಬಳಕೆಯಲ್ಲಿವೆ.

ಗುಲ್ಬರ್ಗಾ ಕನ್ನಡದಲ್ಲಿ ಪಾರಿಭಾಷಿಕ ಪದಗಳು ಹೇರಳವಾಗಿವೆ. ಕವ್ಳಿ [ಬತ್ತ,ನೆಲ್ಲು], ದ್ಯಾಮಿ [ಸೊಳ್ಳೆ], ಅನಾಜ್ [ದಾನ್ಯ], ಬಾಗ್ [ತೋಟ], ಕಟ್ಟಿರುಂಬ [ಇರುವೆ], ಹಂದ್ರ [ಚಪ್ಪರ], ಬಾನ[ಅನ್ನ], ಉಪ್ಪಲೀಗ, ಅಕ್ಕಸಾಲ, ಜವನ [ಯುವಕ] ಚಾಳೀಸ [ಕನ್ನಡಕ], ಸಡಕ್ [ರಸ್ತೆ], ಉಪ್ಪರ್ಗಿ, ರಂಟಿ [ನೇಗಿಲು] ಇತ್ಯದಿ.

ಗುಲ್ಬರ್ಗಾ ಕನ್ನಡದಲ್ಲಿ ಕೆಲವು ವಾಕ್ಯಗಳು ವಿಶೇಷವಾಗಿ ಬರುತ್ತವೆ.

ನಂಋೂನ ಇಲ್ವೇನ್ರಿ ನಿಮ್ಗ,

ಕಷ್ಟದವನ್ನ ಕರಕೊಂಡು ಬಾ ಕಷ್ಟ ಮಾಡ್ಸಕೊ ಬೇಕು.

ಸಾಳ್ಯ ಕಲ್ತು ವ್ಯಾಪಾರದಾಗ ಬಂದು ಬಿದ್ದೀವಿ,

ಮದವಿ ಒಂದು ತಿಂಗಳಬಾದ ಠರಾಸದ.

ಈಗ ಮೂರು ಬಡದದ,

ಹೈಂದಪ ಹೈಂದು,

ಅಂವ ಬಿಲ್ಕೂಲ್ ಲಾಯಕ್ಕಿಲ್ಲ ಇತ್ಯಾದಿ.

## ಕರಾವಳಿ ಕನ್ನಡ

ಮಂಗಳೂರಿನಿಂದ ಕಾರವಾರದವರೆಗೆ ಹರಡಿಕೊಂಡಿರುವ ಪ್ರದೇಶವೇ ಕರಾವಳಿ ಪ್ರದೇಶ. ಇಲ್ಲಿ ಬಳಕೆಯಲ್ಲಿರುವ ಕನ್ನಡವೇ ಕರಾವಳಿ ಕನ್ನಡ. ಇಲ್ಲಿ ಬಳಕೆಯಲ್ಲಿರುವ ಕನ್ನಡವನ್ನು ದಕ್ಷಿಣ ಕರಾವಳಿ ಕನ್ನಡ ಮತ್ತು ಉತ್ತರ ಕರಾವಳಿ ಕನ್ನಡವೆಂದು ವಿಭಾಗಿಸಬಹುದು. ದಕ್ಷಿಣ ಕರಾವಳಿ ಕನ್ನಡ, ತುಳು, ಮಲೆಯಾಳ, ಕೊಂಕಣಿ ಭಾಷೆಗಳ ಪ್ರಭಾವಕ್ಕೆ ಒಳಗಾಗಿದ್ದರೆ, ಉತ್ತರ ಕರಾವಳಿ ಕನ್ನಡ ಕೊಂಕಣಿ, ಮರಾಠಿ ಭಾಷೆಗಳ ಪ್ರಭಾವಕ್ಕೆ ಒಳಗಾಗಿದೆ. ಉಡುಪಿ, ಕುಂದಾಪುರ, ದಕ್ಷಿಣ ಕನ್ನಡ, ಮಂಗಳೂರು, ಕಾಸರಗೋಡು ಇತ್ಯಾದಿ ಪ್ರದೇಶಗಳ ಕನ್ನಡವು ದಕ್ಷಿಣ ಕರಾವಳಿ ಕನ್ನಡಕ್ಕೆ ಹತ್ತಿರವಾಗಿದೆ. ಉತ್ತರ ಕನ್ನಡ ಜಿಲ್ಲೆ, ಕಾರವಾರ, ಅಂಕೋಲ, ಕುಮುಟ, ಹೊನ್ನಾವರ, ಭಟ್ಕಳ ಪ್ರದೇಶಗಳ ಕನ್ನಡ ಉತ್ತರ ಕರಾವಳಿ ಕನ್ನಡಕ್ಕೆ ಹತ್ತಿರವಾಗಿದೆ. ಕೆಲವು ವಿದ್ವಾಂಸರು ಕರಾವಳಿ ಕನ್ನಡ ಹಳಗನ್ನಡಕ್ಕಿಂತಲೂ ಹಿಂದಿನ ಭಾಷಾ ಪ್ರಭೇದವಾಗಿದೆ ಎಂದು ಅಭಿಪ್ರಾಯಪಡುತ್ತಾರೆ. ಮೈಸೂರು ಕನ್ನಡ, ಧಾರವಾಡ ಕನ್ನಡ, ಗುಲ್ಬರ್ಗಾ ಕನ್ನಡದಲ್ಲಿ ಆಗಿರುವ ಭಾಷಿಕ ಬದಲಾವಣೆಗಳು ಕರಾವಳಿ ಕನ್ನಡದಲ್ಲಿ ಸಮಗ್ರವಾಗಿ ಆಗಿಲ್ಲ. ಹೀಗಾಗಿ ಹಳಗನ್ನಡದ ಭಾಷಿಕ ರೂಪಗಳು ಕರಾವಳಿ ಕನ್ನಡದಲ್ಲಿ ಹಾಗೆಯೇ ಉಳಿದವೆ.



## ದಕ್ಷಿಣ ಕರಾವಳಿ ಕನ್ನಡ

ಉಡುಪಿ ದಕ್ಷಿಣ ಕನ್ನಡ, ಕುಂದಾಪುರ, ಮಂಗಳೂರು, ಕಾಸರಗೋಡು, ಬಂದಡ್ಕ ಪ್ರದೇಶಗಳಲ್ಲಿ ಬಳಕೆಯಲ್ಲಿರುವ ಕನ್ನಡವನ್ನೇ ದಕ್ಷಿಣ ಕರಾವಳಿ ಕನ್ನಡವೆಂದು ಸ್ಥೂಲವಾಗಿ ಗುರುತಿಸಬಹುದು. ಈ ಕನ್ನಡದ ಮೇಲೆ ತುಳು ಮಲೆಯಾಳಗಳ ಪ್ರಭಾವ ಅಧಿಕವಾಗಿಯೂ ಕೊಂಕಣಿ ಯ ಪ್ರಭಾವ ಅತ್ಯಲ್ಪವಾಗಿಯೂ ಇದೆ. ಈ ಪ್ರದೇಶಗಳಲ್ಲಿ ಕುರುಬರು, ಹವ್ಯಕರು, ಗೌಡರು, ಶಿವಳ್ಳಿಯವರು, ಹೆಗ್ಡೆ, ಕ್ಷತ್ರಿಯ, ಅಜಿಲರು ಮೊದಲಾದ ಜನಾಂಗದವರು ನೆಲೆಸಿದ್ದಾರೆ. ಇವರೆಲ್ಲರ ಭಾಷೆಯು ಒಂದೊಂದು ಸಾಮಾಜಿಕ ಉಪಭಾಷೆಯಾಗಿದೆ. ಆದ್ದರಿಂದಾಗಿ ದಕ್ಷಿಣ ಕಾಸರಗೋಡಿನಲ್ಲಿ ಹೆಚ್ಚಾಗಿ ನೆಲೆಸಿರುವ ಹವ್ಯಕರ ಕನ್ನಡದ ಜೊತೆಗೆ ಸ್ಥೂಲವಾಗಿ ಶಿವಳ್ಳಿ, ಗೌಡರು, ಮಾದಿಗರ ಕನ್ನಡವನ್ನು ಮಾತ್ರ ದಕ್ಷಿಣ ಕರಾವಳಿ ಕನ್ನಡದ ಅಧ್ಯನದಲ್ಲಿ ವಿವರಿಸಿಕೊಳ್ಳಲಾಗಿದೆ.

ದಕ್ಷಿಣ ಕರಾವಳಿ ಕನ್ನಡದ ಕೆಲವು ಶಬ್ದಗಳಲ್ಲಿ ಆದಿಯ ಇ ಕಾರ ಎ ಕಾರವಾಗಿ ಬದಲಾಗುತ್ತದೆ.

| ಶಿವಳ್ಳಿ ಕನ್ನಡ | ಹವ್ಯಕ ಕನ್ನಡ | ಗೌಡ ಕನ್ನಡ | ಪ್ರಮಾಣ ಭಾಷೆ |
|---|---|---|---|
| ಎರು | ಎರಗು | – | ಇರುವೆ |
| ಕೆಮಿ | ಕೆಮಿ | ಕೆಬಿ | ಕಿವಿ |
| ನೆರಿ | ನೆರಿ | ನೆರೆ | ನರಿಗೆ |
| ಹೆರಿ | ಹೆರೆ | ಹಿರಿ | ಹಿರಿದು |
| ಇಲಿ | ಎಲಿ | ಎಲಿ | ಇಲಿ |

ಕೆಲವು ಶಬ್ದಗಳಲ್ಲಿ ಆದಿಯ ಉ ಕಾರ ಒ ಕಾರವಾಗಿ ಬದಲಾಗುತ್ತದೆ.

| ಶಿ.ಕ | ಹ.ಕ | ಗೌ.ಕ | ಪ್ರ.ಭಾ |
|---|---|---|---|
| ತೊಳಿ | ತೊಳಿ | ತ್ವೊಳಿ | ತುಳಿ |
| ಸೊರಿ | ಸೊರಿ | ಸ್ವೊರ್ಗ್ಗಿ | ಸುರಿ |
| ಕುಣಿ | ಕ್ವೊಣಿ | ಕ್ವೊಣಿ | ಕುಣಿ |
| ಉಳಿ | ಒಳಿ | ಒಳಿ | ಉಳಿಯು |

ಕೆಲವು ಶಬ್ದಗಳಲ್ಲಿ ಆದಿಯ ಅ ಕಾರ ಎ ಕಾರವಾಗುತ್ತದೆ.

| ಶಿ.ಕ | ಹ.ಕ | ಗೌ.ಕ | ಪ್ರ.ಭಾ |
|---|---|---|---|
| ನೆಗು | ನೆಗೆ | ನೆಗಾಡು | ನಗು |
| ನೈಡು | ನೆಡು | ನೆಡು | ನಡು |
| ಜನ | ಜೆನ | ಜೆನ | ಜನ |
| ಗೈಂಟ್ಲಾ | ಗೈಂಟು | ಗಂಟ್ಲಾ | ಗಂಟಲು |

ಕೆಲವು ಶಬ್ದಗಳಲ್ಲಿ ಆದಿಯ ಅ ಕಾರವು ವ ಕಾರವಾಗುತ್ತದೆ.

| ಶಿ.ಕ | ಹ.ಕ | ಗೌ.ಕ | ಪ್ರ.ಭಾ |
|---|---|---|---|
| ಆಡು | ವಡು | ವಡು | ಆಡು |
| ಆಮೆ | ವಮೆ | ವಮೆ | ಆಮೆ |
| ಜಾಂಗಡೆ | ಜೇಗುಟೆ | ಜಾಗಟೆ | ಜಾಗಟೆ |

ಶಿವಳ್ಳಿ ಕನ್ನಡ ಮತ್ತು ಹವ್ಯಕರ ಕನ್ನಡದಲ್ಲಿ ಕೆಲವು ಶಬ್ದಗಳಲ್ಲಿ ಅಕಾರ ಸ್ಥಾನದಲ್ಲಿ ಗೌಡ ಕನ್ನಡದಲ್ಲಿ ಒ ಕಾರ ಬರುತ್ತದೆ.

| ಶಿ.ಕ/ಹ.ಕ | ಗೌ.ಕ | ಪ್ರ.ಭಾ |
|---|---|---|
| ಮಸಿ | ಮೊಸಿ | ಇದ್ದಿಲು |

| | | |
|---|---|---|
| ಮಜ್ಜಿಗೆ | ಮೊಜ್ಜಿಗೆ | ಮಜ್ಜಿಗೆ |
| ಬಯ್ಲು | ಬೊಯ್ಲು | ಬಯಲು |
| ಬಳ್ಳಿ | ಬೊಳ್ಳಿ | ಬಳ್ಳಿ |

ಕೆಲವು ಶಬ್ದಗಳಲ್ಲಿ ಆದಿಯ ಒ ಕಾರ ಉ ಕಾರವಾಗುತ್ತದೆ.

ಸೊಂಡಿಲು>ಸುಂಡ್ಲು, ಹೊಕ್ಳ>ಹುಕ್ಳ,

ಕೆಲವು ಶಬ್ದಗಳಲ್ಲಿ ಆದಿಯ ಒ ಕಾರ ಎ ಕಾರವಾಗುತ್ತದೆ.

ನೊಣ>ನೆಳವು>ನಳ, ಹ್ವೊರ್ಡು>ಹೊರ್ಡು, ಹ್ಯೆರ್ಗು>ಹೆರಗು>ಹೊರಗೆ

ಕೆಲವು ಶಬ್ದಗಳ ಉಚ್ಚಾರದಲ್ಲಿ ಉ ಸ್ವರವು ಪದಮಧ್ಯದಲ್ಲಿ ಇ, ಎ ಮತ್ತು ಅ ಗಳಿಗೆ ಆದೇಶವಾಗಿ ಬರುತ್ತದೆ.

| ಶಿವಳ್ಳಿ ಕನ್ನಡ | ಗೌಡ ಕನ್ನಡ |
|---|---|
| ಅರಗು–ಅರಗು | ಮೊಸರು–ಮೊಸರು |
| ಹಳುದಿ–ಹಳದಿ | ಸೂತುಕ–ಸೂತಕ |
| ಇಳುತ–ಇಳಿತ | ಬಾಗುಲು–ಬಾಗಿಲು |
| ಎಳುದಾಟ–ಎಳೆದಾಟ | ನಗುಡಿ–ನೆಗಡಿ |
| ನೇರುಳೆ–ನೇರಳೆ | ನಾದುನಿ–ನಾದಿನಿ |

ಶಿವಳ್ಳಿ ಕನ್ನಡದಲ್ಲಿ ಅಘೋಷ ವ್ಯಂಜನಗಳು ಘೋಷ ವ್ಯಂಜನಗಳಾಗುತ್ತವೆ. ತಳಿ>ದಾಳಿ, ತುಂಬಿ>ದುಂಬಿ, ಕೆಂಡ>ಗೆಂಡ. ಗೌಡ ಕನ್ನಡದಲ್ಲಿ ಶಬ್ದಗಳ ನಡುವೆ ಅನುನಾಸಿಕ ವ್ಯಂಜನವು ಉಂಟಾಗುತ್ತದೆ. ಬಳಂಕ>ಬಳುಕು, ದಾಂಟು>ದಾಟು, ಜಿಗುಂಟು>ಜಿಗುಟು, ಹವ್ಯಕ ಕನ್ನಡದಲ್ಲಿ ಶಬ್ದಗಳ ಅಂತ್ಯದ ಸ್ಪರ್ಶ ವ್ಯಂಜನ ದ್ವಿತ್ವವಾಗುತ್ತದೆ. ಕೊಳಕು>ಕೊಳಕ್ಕು, ಸೆಳೆತ>ಸೆಳತ್ತ, ಕೆಣಕು>ಕೆಣಕ್ಕು. ಹವ್ಯಕ ಕನ್ನಡದಲ್ಲಿ ತ ಕಾರ ಚ ಕಾರವಾಗುತ್ತದೆ. ತೆಳು>ಚಳು, ತಂಬಿಗೆ>ಚಂಬು, ತಾಳೆ>ಜಾಳೆ, ಗೌಡಕನ್ನಡದಲ್ಲಿ ಸ ಕಾರ ಚ ಕಾರವಾಗುತ್ತದೆ. ಸಪ್ಪೆ>ಚಪ್ಪೆ, ಸೊಪ್ಪು>ಚೊಪ್ಪು, ಸಂಜೆ>ಚಂಜಿ, ಶಿವಳ್ಳಿ ಮತ್ತು ಗೌಡ ಕನ್ನಡದಲ್ಲಿ ಮ ಕಾರ ವ ಕಾರವಾಗುತ್ತದೆ. ಕೆಮಿ> ಕಿವಿ, ಬಾಮಿ>ಬಾವಿ, ಆಮೆ>ಆವೆ, ಸಾಸ್ಮಿ>ಸಾಸಿವೆ.

ದಕ್ಷಿಣ ಕರಾವಳಿ ಕನ್ನಡದಲ್ಲಿ ಏಕವಚನಕ್ಕೆ ಪ್ರತ್ಯೇಕ ಪ್ರತ್ಯಯವಿಲ್ಲ. ಬಹುವಚನಕ್ಕೆ ಹಲವು ಪ್ರತ್ಯಗಳಿವೆ. ಶಿವಳ್ಳಿ ಕನ್ನಡದಲ್ಲಿ ಅಕ್ಳು, ದಿಕ್ಳು, ಗಳು, ರು ಬಹುವಚನ ಪ್ರತ್ಯಯಗಳಿವೆ. ಮಗಳಕ್ಕು, ಮಕ್ಳು, ಅತ್ತೇದಿಕ್ಳು, ಬ್ರಾಂಬ್ರು, ಹವ್ಯಕ ಕನ್ನಡದಲ್ಲಿ ಅಕ್ಕೊ, ಅಂದ್ರು, ಂಗೋ, ಗಳು, ಎರು ಎಂಬ ಬಹುವಚನ ಪ್ರತ್ಯಯಗಳು, ಇವೆ. ಮಗಳಕ್ಕೊ, ಮಗಂದ್ರು, ಮರಂಗೊ, ತಲಗೊ,

ಅತ್ಯೋರು ಅತ್ತಿಗೇರು, ಗೌಡ ಕನ್ನಡದಲ್ಲಿ ಕಳು, ಅಂದಿರು, ಗ, ಂಗ, ರು, ಬಹುವಚನ ಪ್ರತ್ಯಯಗಳಾಗಿವೆ. ಅತ್ತೆಕಳ್, ಅಕ್ಕಂದರು, ಕಾಣುಗ, ಕುದುರೆಗ,

ದಕ್ಷಿಣ ಕರಾವಳಿ ಕನ್ನಡದಲ್ಲಿ ವಿಶಿಷ್ಟ ಶಬ್ದ ಪ್ರಯೋಗಗಳಿವೆ ಅವುಗಳಲ್ಲಿ ಕೆಲವು ಹೀಗಿವೆ. ತೊಡು [ತಿನ್ನುವ ಬಯಕೆ ], ಕೊಟ್ಟು [ಗುದ್ದಲಿ ], ಸಿಯಾಳ [ಎಳನೀರು], ಎರು [ಇರುವೆ], ಇವು ಶಿವಳ್ಳಿ ಕನ್ನಡದ ವಿಶೇಷ ಪದಗಳಾಗಿವೆ. ಹವ್ಯಕ ಕನ್ನಡದಲ್ಲಿ ಕೋಣಿ [ಕುಣಿ], ವಮೆ [ಆಮೆ], ನೆಳವು [ನೊಣ], ಕೆಣಕ್ಕು [ಕೆಣಕು ], ಮಾಣಿ [ಹುಡುಗ], ಕೂಂಗುರ್[ಕೊಕ್ಕರೆ], ನಾಳಂಗ [ನಾಲಿಗೆ], ಕಙ್ಞ [ಹುಡುಗ], ಇಕ್ಕು [ಜಜ್ಜು], ಸಂಸ[ಸೆತುವೆ], ಕುದುಕ [ನರಿ], ನೆರ [ಬಣ್ಣ], ಮೀಯಣ [ಸ್ನಾನ] ಇತ್ಯಾದಿ ವಿಶೇಷ ಶಬ್ದಗಳಾಗಿವೆ.

## ಉತ್ತರ ಕಾರಾವಳಿ ಕನ್ನಡ

ಉತ್ತರ ಕನ್ನಡ, ಹೊನ್ನಾವರ, ಕುಮುಟ, ಶಿರಸಿ, ಸಿದ್ಧಾಪುರ, ಯೆಲ್ಲಾಪುರ, ಕಾರವಾರ, ಭಟ್ಕಳ, ಅಂಕೋಲ, ಪ್ರದೇಶಗಳಲ್ಲಿ ಆಡುವ ಕನ್ನಡವನ್ನೇ ಉತ್ತರ ಕರಾವಳಿ ಕನ್ನಡ ಎಂದು ಕರೆಯಲಾಗುತ್ತದೆ. ಇಲ್ಲಿನ ಕನ್ನಡದ ಮೇಲೆ ಉರ್ದು, ಕೊಂಕಣಿ, ಮರಾಠಿ ಭಾಷೆಗಳ ಪ್ರಭಾವವಿದೆ. ಹೊನ್ನಾವರ, ಸಿದ್ದಾಪುರ, ಶಿರಸಿ ಯೆಲ್ಲಾಪುರ, ಸೂಪಗಳ ಕಡೆ ಹೆಚ್ಚಾಗಿ ಹವ್ಯಕ ಜನಾಂಗ ನೆಲೆಸಿವೆ. ಹೊನ್ನಾವರ, ಭಟ್ಕಳ, ಕಾರವಾರ, ಅಂಕೋಲ ಮುಂತಾದ ಕಡೆಗಳಲ್ಲಿ ನಾಡವರು, ನಾಯಕರು ನೆಲೆಸಿದ್ದಾರೆ. ಈ ಜನ ಸಮುದಾಯಗಳೇ ಅಲ್ಲದೆ ಕುಂಬಾರರು, ಗೊಲ್ಲರು, ಉಪ್ಪಾರರು, ಗಾವುಂಡಿಗರು, ಕಲಾಯ ಬಡಿಗೇರರು, ಲಂಬಾಣಿಗರು, ಅಂಬಿಗರು, ಬೋಯಿಗಳು ಮೊದಲಾದ ಜನಾಂಗಳು ನೆಲೆಸಿರುವುದು ಕಂಡು ಬರುತ್ತದೆ. ಈ ಎಲ್ಲಾ ಜನಾಂಗಗಳ ಕನ್ನಡವು ಒಂದೊಂದು ಸಾಮಾಜಿಕ ಉಪಭಾಷೆಯಾಗಿದೆ. ಈ ಉಪಭಾಷೆಗಳಲ್ಲಿರುವ ಸಾಮ್ಯರೂಪಗಳ ಆಧಾರದ ಮೇಲೆ ಉತ್ತರ ಕರಾವಳಿ ಕನ್ನಡ ಎಂದು ಸ್ಥೂಲವರ್ಗೀಕರಣ ಮಾಡಿಕೊಳ್ಳಬಹುದಾಗಿದೆ.

ಉತ್ತರಕರಾವಳಿ ಕನ್ನಡದಲ್ಲಿ ಹವ್ಯಕ ಕನ್ನಡವನ್ನು ಬಿಟ್ಟು ಉಳಿದ ಕನ್ನಡಗಳಲ್ಲಿ ಶಬ್ದಾಂತ್ಯದ ಎ ಕಾರ ಇ ಕಾರವಾಗುತ್ತದೆ.

ನೆಡೆ>ನೆಡಿ, ವ್ಯಥೆ>ವ್ಯಥಿ, ಕಟ್ಲೆ>ಕಟ್ಲಿ, ಗಂಟೆ>ಗೆಂಟೆ, ಇಲ್ಲಿ >ಎಲ್ಲಿ

ಉತ್ತರ ಕರಾವಳಿಯ ಕನ್ನಡದಲ್ಲಿ ಕೆಲವು ಶಬ್ದಗಳ ಆದಿಯ ಉ ಕಾರ ಒ ಕಾರವಾಗುತ್ತದೆ.

ಕುದ್ರೆ>ಕ್ವೊದ್ರಿ, ಕುಡಿ> ಕ್ವೊಡಿ, ಕುದಿ>ಕ್ವೊದಿ,

ಕೆಲವು ಶಬ್ದಗಳ ಳ ಕಾರ ಲ ಕಾರವಾಗಿ ಬದಲಾಗುತ್ತದೆ ಮುಂದುವರಿದು ಲ ಕಾರ ನ ಕಾರವಾಗುತ್ತದೆ.

ಬಿದ್ದಳು>ಬಿದ್ಲು, ಕೊಟ್ಟಳು>ಕೊಟ್ಲು>ಕೊಟ್ಳು , ಕ್ವೊಡಲಾರೆ>ಕ್ವೊಡನಾರೆ, ಬರಲಿಲ್ಲ>ಬರನಿಲ್ಲ,

ನಾಡವರ ಕನ್ನಡದಲ್ಲಿ ಶಬ್ದದ ಆದಿಯ ಒ ಕಾರ ಉ ಕಾರವಾಗುತ್ತದೆ.

ತೊಟ್ಟು>ತುಟ್ಟು, ಹೊಟ್ಟು>ಹುಟ್ಟು, ಕ್ವೊಡು>ಕುಡು

ಉತ್ತರ ಕರಾವಳಿಯ ಕನ್ನಡದಲ್ಲಿ ಏಕವಚನಕ್ಕೆ ಪ್ರತ್ಯೇಕ ಪ್ರತ್ಯಗಳಿಲ್ಲ.ಆದರೆ ಬಹುವಚನಕ್ಕೆ ಹಲವು ಪ್ರತ್ಯಯಗಳಿವೆ.

ಅಕ್ಕೊ – ತಂದ್ಯಕ್ಕೊ, ತ್ಯಂಗ್ಯಕ್ಕೊ

ಅಕ್ಕೋ – ಮಗಳಕ್ಕೊ, ಎಣ್ ಮಕ್ಕೋ,

ಇಂದಿಕ್ಕೋ – ತಾಯಂದಿಕ್ಕೊ, ತಾಯಂದಿಕ್ಕು

ದೀಕ್ಳು – ಅತ್ತೆದೀಕ್ಳು, ತಂಗಿದೀಕ್ಳು

ಗ್ಳು – ಹಳ್ಳಿಗ್ಳು, ಆಳುಗ್ಳು

ಗೊ – ಆಳ್ಗೊ, ಕರಗೊ, ತಲೆಗೊ

ಂಗೊ – ಮರಂಗೊ, ಕಂಟಂಗೊ

ಓರು – ಅತ್ಯೋರು, ಅತ್ತೇರು, ಮಾವನೋರು

ಗಳು – ಗುರುಗಳು, ಮಕ್ಕಳು

ಹವ್ಯಕ ಕನ್ನಡ ಹಾಲಕ್ಕಿ ಕನ್ನಡದ ಸರ್ವನಾಮಗಳಲ್ಲಿ ಹೋಲಿಕೆಯಿದೆ. ಮತ್ತು ಅಲ್ಪ ವ್ಯತ್ಯಾಸವೂ ಇದೆ. ಹವ್ಯಕ ಕನ್ನಡದಲ್ಲಿ ಉತ್ತಮ ಪುರುಷ ಏಕವಚನ ಆನು, ಯಾನು, ನಾನು, ನಾ, ಆಗಿದೆ. ಬಹುವಚನ ಯೆಂಗ, ಯೆಂಗೊ, ಯೆಂಗ್ಳು, ನಂಗ, ನಂಗ್ಳೊ, ನಂಗ್ಳು, ನಂಗೋವು ಬಳಕೆಯಲ್ಲಿದೆ. ಹಾಲಕ್ಕಿ ಕನ್ನಡದಲ್ಲಿ ಉತ್ತಮ ಪುರುಷ ಏಕವಚನ ನಾನು, ನಾ, ಬಹುವಚನ ನಾವು, ನಾವ್, ನಾವು ಆಗಿದೆ. ಹವ್ಯಕ ಕನ್ನಡದಲ್ಲಿ ಮಧ್ಯಮ ಪುರುಷ ಏಕವಚನ ನೀನು, ನೀ. ಬಹುವಚನ ನಿಂಗೊ, ನಿಂಗ, ನಿಂಗ್ಳು, ನಿಂಗೊವು, ನೀವ್, ನೀವು ಆಗಿದೆ. ಹಾಲಕ್ಕಿ ಕನ್ನಡದಲ್ಲಿ ನೀನು, ನೀ ಏಕವಚನ. ನೀವು, ನೀವ್, ನೀಮು ಬಹುವಚನಗಳಾಗಿವೆ. ಹವ್ಯಕ ಕನ್ನಡದಲ್ಲಿ ಪ್ರಥಮ ಪುರುಷ ಪುಲ್ಲಿಂಗ ಸ್ತ್ರೀಲಿಂಗ , ನಪುಂಸಕಲಿಂಗವು ಏಕವಚನದಲ್ಲಿ ಕ್ರಮವಾಗಿ ಅವ, ಅವ್ಳು, ಅದು. ಬಹುವಚನ ಅವ್ರು, ಅವು, ಅವ್ಕೊಗಳಾಗಿವೆ. ಹಾಲಕ್ಕಿ ಕನ್ನಡದಲ್ಲಿ ಪ್ರಥಮ ಪುರುಷದ ಪುಲ್ಲಿಂಗ ಸ್ತ್ರೀಲಿಂಗ, ನಪುಂಸಕಲಿಂಗವು ಏಕವಚನದಲ್ಲಿ ಅವ, ಅವ್ನು, ಅವ್ಳು,ಅದು. ಬಹುವಚನದಲ್ಲಿ ಅವ್ರು, ಅವು ಆಗುತ್ತದೆ. ಮುಕ್ರಿಗಳು, ನಾಯಕರು,

ನಾಡವರು ಮುಂತಾದವರು ಆಡುವ ಕನ್ನಡದಲ್ಲಿ ಉತ್ತಮ ಪುರುಷ ಬಹುವಚನದಲ್ಲಿ ಸಮಾವೇಶಕ ಅಸಮಾವೇಶಕಗಳಲ್ಲಿ ಅರ್ಥವ್ಯತ್ಯಾಸವಿಲ್ಲ. ಇವು ಈ ಮೂಲವ್ಯವಸ್ಥೆಯನ್ನು ಕಳೆದುಕೊಂಡಿದೆ. ಆದರೆ ಹವ್ಯಕ ಕನ್ನಡದಲ್ಲಿ ಹಾಗೆಯೆ ಉಳಿದು ಕೊಂಡಿದೆ.

ಉತ್ತರ ಕರಾವಳಿಯ ಕನ್ನಡದಲ್ಲಿ ಭೂತಕಾಲ ಸೂಚಕ ದ್, ತ್, ಡ್, ಪ್ರತ್ಯಯಗಳಿವೆ. ಭೂತೇತರ ಕಾಲವನ್ನು ತ್ ಪ್ರತ್ಯಯದ ಮೂಲಕ ಸೂಚಿಸಲಾಗುತ್ತದೆ. ಇಸು ಪ್ರತ್ಯಯ ಸೇರುವುದರಿಂದ ಮಾಡ್ಸು, ಕೇಳ್ಸು, ಹಿಡ್ಸು ಇತ್ಯಾದಿ ಪದಗಳು ಸಿದ್ಧಿಸುತ್ತವೆ. ನೋಡು, ಮಾಡ್ರಿ, ಹೋಗ್ರಿ, ಕುಡಿತ್ರ ಮೊದಲಾದವು ಆಜ್ಞಾರ್ಥಕ ಕ್ರಿಯಾರೂಪಗಳಾಗಿವೆ. ಗು ಪ್ರತ್ಯಯ ಸೇರುವುದರಿಂದ ಮಾಡ್ಗು, ಕೇಳ್ಗು, ಹೇಳ್ಗು, ಬರ್‍ಗು ಮೊದಲಾದ ವಿದ್ಯರ್ಥ ಕ್ರಿಯಾರೂಪಗಳು ಆಗುತ್ತವೆ. ಮಾಡವು, ತಿನ್ನವು, ಹೋಗದ್ದೆ, ಕೇಳದ್ದೆ, ತಿನ್ನಡ, ತಿಂತಿಲ್ಲೆ, ಹೋದ್ನಿಲ್ಲೆ, ಮಾಡೂದಿಲ್ಲೆ ಹೋಗೂಕಾಗ, ಕೇಳೂಕಾಗ, ಮೊದಲಾದವು ನಿಷೇದಾರ್ಥಕ ಕ್ರಿಯಾರೂಪಗಳಾಗಿವೆ.

ಉತ್ತರ ಕರಾವಳಿಯ ಕನ್ನಡದ ವಿವಿಧ ಜನಾಂಗಗಳಲ್ಲಿ ಪಾರಿಭಾಷಿಕ ಪದಗಳು ಹೇರಳವಾಗಿವೆ. ಹವ್ಯಕ ಕನ್ನಡದಲ್ಲಿ ಹೆಡಿಗೆ [ಚಿಟ್ಟೆ], ಏಂಚಣಿ [ಏಣಿ], ಸವುಡು [ಮುರುಸೊತ್ತು], ಅವಳ್ಳೆ [ಆಕಳಿಕೆ], ಚೋರು [ಸೋರು], ವೈನ [ಚೆನ್ನಾಗಿ], ಮಸ [ಸ್ವಲ್ಪ], ವೊಲಿ [ಸಾಲು] ಮೊದಲಾದ ವಿಶೇಷ ಶಬ್ದಗಳಿವೆ. ಹಾಲಕ್ಕಿ ಕನ್ನಡದಲ್ಲಿ ಬೀಜಗಿತ್ತಿ [ಸೂಲಗಿತ್ತಿ], ಬಣ್ಣ [ಸೀರೆ], ತೀರು [ಅಳು], ಹೆರ್‍ಚು [ಓದಿಸು], ನಮು [ನಾವು], ಚಾವಿರ [ಸಾವಿರ], ಲಚ್ಚ [ಲಕ್ಷ] , ನಿಂಗಳ [ಕೆಂಡ], ಚರುಕಲು [ನಕ್ಷತ್ರ], ದಿಂಗೈ [ಕರೆ] ಮೊದಲಾದ ವಿಶಿಷ್ಟ ಶಬ್ದಗಳು ಬಳಕೆಯಲ್ಲಿವೆ.

ಅಧ್ಯಾಯ 6

# ಸಾಮಾಜಿಕ ಉಪಭಾಷೆಗಳು

## ಕೊರಗ ಕನ್ನಡ

ಕೊರಗರು ಮಾತನಾಡುವ ಕನ್ನಡವೇ ಕೊರಗ ಕನ್ನಡ. ಇದು ಕನ್ನಡದ ಒಂದು ಸಾಮಾಜಿಕ ಉಪಭಾಷೆಯಾಗಿದೆ. ಕೊರಗರದು ಒಂದು ಬುಡಕಟ್ಟು ಸಮಾಜ. ತಮ್ಮದೇಯಾದ ಕುಟುಂಬ ರಚನೆ, ವಿವಾಹ, ಬಂದುತ್ವ, ವಿಧಿ–ನಿಷೇದ, ಆಡಳಿತ, ನ್ಯಾಯವ್ಯವಸ್ಥೆ ತಮ್ಮದೇ ಪೌರೋಹಿತ್ಯವನ್ನು ಹೊಂದಿರುವ ಸಾಂಸ್ಕೃತಿಕ ವಿಶಿಷ್ಟ ಬುಡಕಟ್ಟು ಸಮಾಜವಾಗಿದೆ. ಇಂದು ಕೊರಗ ಸಮುದಾಯ ಬುಡಕಟ್ಟಿನಿಂದ ಜಾತಿ ಸಮಾಜವಾಗಿ ಪರಿವರ್ತನೆಗೊಳ್ಳುತ್ತದೆ.

ಕೊರಗರು ತಮ್ಮ ಮೂಲವನ್ನು ಪುರಾಣ ಮತ್ತು ಐತಿಹ್ಯದ ಮೂಲಕ ಗುರುತಿಸಿಕೊಳ್ಳುತ್ತಾರೆ. ತಮ್ಮ ಮೂಲವನ್ನು ಕುರಿತು ಕೊರಗರು ಹೇಳುವ ಪುರಾಣಗಳು ಜಾತಿ ಸಂಕರದಿಂದ ಆದ ಪರಿಣಾಮಗಳನ್ನು ಹೇಳುತ್ತದೆ. ತಾವೇಕೆ ಮೇಲುವರ್ಗದ ಎಂಜಲು ತಿನ್ನುತ್ತೇವೆ. ತಾವೇಕೆ ಬಟ್ಟೆ ಉಡಬಾರದು ಮತ್ತು ಈ ನೆಲದ ಮೂಲ ಆದಿವಾಸಿಗಳಾದ ತಮ್ಮಿಂದಲೇ ವರ್ಣ, ಜಾತಿ, ಕುಲ ವೃತ್ತಿಗಳ ವ್ಯವಸ್ಥೆ ಸೃಷ್ಟಿಯಾಯಿತು ಎಂಬುದಕೆ ತಮ್ಮದೇ ಪುರಾಣವನ್ನು ಸಮರ್ಥನೆಯಾಗಿ ನೀಡುತ್ತಾರೆ. ಕೊರಗರ ಬಗ್ಗೆ ದೊರೆಯುವ ಐತಿಹ್ಯಗಳು ಈ ಬುಡಕಟ್ಟು ಕಾಡು ಪಾಲಾದ ಕುರಿತು ಮಾಹಿತಿಯನ್ನು ನೀಡುತ್ತದೆ. ಮಾನವಶಾಸ್ತ್ರಜ್ಞ ವಾಲ್ ಹೌಸ್‌ರವರು ಕೊರಗರನ್ನು ಕುರಿತು "ನಾಡಾಡಿಗಳಾಗಿದ್ದ ಕೊರಗರು ಆರ್ಯರ ಆಕ್ರಮಣಕ್ಕೆ ತುತ್ತಾಗಿ ಬೆಟ್ಟಗುಡ್ಡಗಳನ್ನು ಸೇರಿದ ಅಥವಾ ಹೇಯವಾದ ಗುಲಾಮಗಿರಿಗೆ ಒಳಗಾದ ಮೂಲ ನಿವಾಸಿ ಸಂತಾನವಿರಬೇಕು, ಇವರನ್ನು ಜಾತಿ ಬಾಹಿರರೆಂದು ಅಸ್ಪಶ್ಯರೆಂದು ವಿಚಾರಹೀನರೆಂದು ಕೊಳಕರೆಂದು ಕರೆದು ಸಮಾಜದ ಹೊರಗಿರಿಸಲಾಯಿತು. ಅನಾಗರಿಕರೆಂದು ಬಹಿಷ್ಕರಿಸಲಾಯಿತು. ಮುಂದೆ ಇವರೊಳಗೆ ಅನೇಕ ಪಂಗಡಗಳಾಗಿರಬೇಕು."( ಕರ್ನಾಟಕ ಬುಡಕಟ್ಟುಗಳು, ಎ.ವಿ. ನಾವಡ, ಪು–273) ಕ್ಯಾಂಪಬೆಲ್ ಕೊರಗರನ್ನು ಕೊರಸ್ ಅಥವಾ ಕೊರಗರ್ ಎಂದು ಕರೆದಿದ್ದಾರೆ. ಬುಕನೆನ್ ಕೊರರರ್, ಕೊರವರ್ ಎಂದು ಕರೆದಿದ್ದಾರೆ. ಕುರುವರು ಎಂಬುದಕ್ಕೆ ಬೆಟ್ಟದಲ್ಲಿ ವಾಸಮಾಡುವವರು ಎಂದೂ ಅರ್ಥವಿದೆ. ಕೊರಗರೆಂದರೆ ಸೂರ್ಯನ ಆರಾಧನೆ ಮಾಡುವವರು, ಕೊರ ಎಂದರೆ ಸೂರ್ಯ ಆದ್ದರಿಂದ ಇವರನ್ನು ಕೊರಗರು ಎನ್ನಲಾಗುತ್ತದೆ ಎಂದು ಲಾರೆನ್ಸರವರು ಅಭಿಪ್ರಾಯಪಡುತ್ತಾರೆ.

ಕರಾವಳಿ ಕರ್ನಾಟಕದ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಕೊರಗರು ನೆಲೆಸಿದ್ದಾರೆ. ಅಲ್ಲದೆ ಮಂಗಳೂರು ಪರಿಸರದ ಕುದ್ರೋಳಿ, ಗುಡ್ಡೆ, ಬಜಪೆ, ಮರವೂರು, ಬೈಕಂಪಾಡಿ, ಹಳೆಯಂಗಡಿ, ದೇತಬೈಲು, ಮುಲ್ಕಿ, ಕಿನ್ನಿಮುಲ್ಕಿ, ಮಿಜಾರು, ಬಪ್ಪನಾಡು ಮೊದಲಾದೆಡೆಗಳಲ್ಲಿ ಉಡುಪಿ ಬಳಿಯ ಪುತ್ತೂರು, ಬನ್ನಂಜೆ, ಇಂದ್ರಾಳಿ, ಮಣಿಪಾಲ, ಪರ್ಕಳ, ಕೊರಂಗ್ರಪಾಡಿ, ಚಿತ್ಪಾಡಿ, ಕುತ್ಪಾಡಿಗಳಲ್ಲಿ, ಕುಂದಾಪುರ ಬಳಿಯ ಅಸೋಡು, ಬಿದ್ಕಲ್ ಕಟ್ಟೆ, ಅಮಾಸೆ ಬೈಲ್, ವಕ್ವಾಡಿ, ಕುಂಬಾಶಿ, ವಡೇರ, ಹೋಬಳಿಗಳಲ್ಲಿ ಹಾಗೂ ಕಾರ್ಕಳ, ಪುತ್ತೂರು, ಸುಳ್ಯ, ಬೆಳ್ತಂಗಡಿ ತಾಲ್ಲೂಕುಗಳ ಕೆಲವು ಭಾಗಗಳಲ್ಲಿ ಕೊರಗರು ನೆಲೆಸಿದ್ದಾರೆ.

ಕೊರಗರು ತಮ್ಮ ಭಾಷೆಯನ್ನು ಸಮ್ಮಿಶ್ರಭಾಷೆ ಎಂದು ಕರೆದುಕೊಳ್ಳುತ್ತಾರೆ. ಕೊರಗಭಾಷೆಯ ಮೇಲೆ ತುಳು ಭಾಷೆಯ ಪ್ರಭಾವವಿದೆ. ಕೆಲವು ವಿದ್ವಾಂಸರು ಕೊರಗಭಾಷೆಯನ್ನು ಸ್ವತಂತ್ರ ಭಾಷೆಯಾಗಿ ಘೋಷಿಸಬೇಕು ಎನ್ನುತ್ತಾರೆ. ಸ್ಟುವರ್ಟರವರು ಕೊರಗ ಭಾಷೆಯನ್ನು ತುಳುವಿನ ಉಪಭಾಷೆ ಎನ್ನುತ್ತಾರೆ. 1881 ರಲ್ಲಿ ದಕ್ಷಿಣ ಕನ್ನಡದ ಜಿಲ್ಲಾಧಿಕಾರಿಯಾಗಿದ್ದ ಬ್ರೂಡಿಯವರು ಕೊರಗ ಭಾಷೆಯನ್ನು ಕುರಿತು ಹೀಗೆ ಬರೆಯುತ್ತಾರೆ "ಈ ಭಾಷೆಯು ಇತರ ದ್ರಾವಿಡ ಭಾಷೆಗಳೊಂದಿಗೆ ಆಪ್ತತೆಯನ್ನು ಹೊಂದಿದಂತೆ ವಿಶೇಷವಾಗಿ ಕಂಡರೂ ಆ ಸಂಬಂಧವು ತುಳು ಕನ್ನಡ, ಮಲೆಯಾಳಂ ತುಳುಗಳ ನಡುವಣ ಸಂಬಂಧಕ್ಕಿಂತ ಹೆಚ್ಚಿನದೇನೂ ಇಲ್ಲ. ಈ ಕೊರಗ ಭಾಷೆಯನ್ನು ಸ್ವತಂತ್ರ ದ್ರಾವಿಡ ಭಾಷೆಯಾಗಿಯೇ ಗುರುತಿಸಬೇಕು ಹೊರತು ಅದನ್ನು ತುಳುವಿನ ಅಥವಾ ಇನ್ನಾವುದೇ ಭಾಷೆಯ ಉಪಭಾಷೆಯಾಗಿ ಪರಿಗಣಿಸಬಾರದು". ಡಿ.ಎನ್ ಶಂಕರ ಭಟ್ಟ್ ರವರು ಕೊರಗರನ್ನು ಉಡುಪಿ ಬಳಿಯ ಒಂಟಿಕೊರಗ, ಕುಂದಾಪುರದ ಬಳಿಯ ಮೂಡುಕೊರಗ, ಹೆಬ್ರಿ ಕಾರ್ಕಳ ಪರಿಸರದ ತಪ್ಪು ಕೊರಗ ಎಂದು ಮೂರು ವರ್ಗಗಳಾಗಿ ವಿಂಗಡಿಸಿ ಈ ಮೂರು ವರ್ಗಗಳ ಉಪಭಾಷೆಗಳನ್ನು ಅಧ್ಯಯನ ಮಾಡಿ ಒಂಟಿ ಮತ್ತು ತುಳು ಹಾಗೂ ಮೂಡು ಮತ್ತು ಕನ್ನಡಗಳ ನಡುವಿನ ಭಾಷಾನಂಟನ್ನು ಗುರುತಿಸುತ್ತಾರೆ. ಅಲ್ಲದೆ ಕೊರಗವನ್ನು ಉತ್ತರದ್ರಾವಿಡ ಭಾಷಾ ಪರಿವಾರದೊಂದಿಗೆ ಗುರುತಿಸಬೇಕು ಎಂದಿದ್ದಾರೆ. ಕೊರಗರ ಭಾಷೆಗೆ ಲಿಪಿ ಇಲ್ಲ. ಆಡು ಮಾತು ಕನ್ನಡವಾಗಿರುವುದರಿಂದ ಇದನ್ನು ಕನ್ನಡದ ಉಪಭಾಷೆ ಎಂದು ಸದ್ಯಕ್ಕೆ ಪರಿಗಣಿಸಬಹುದಾಗಿದೆ.

ಕೊರಗರ ಮೂರು ಉಪಭಾಷೆಗಳ ನಡುವೆ ನಡೆದ ಭಾಷಿಕ ಕೊಳು-ಕೊಡೆ ಭಾಷಿಕ ಸಂಬಂಧದ ಅಂತರವನ್ನು ಕಡಿಮೆಗೊಳಿಸಿದೆ. ಒಂಟಿ ಕೊರಗವು ಕನ್ನಡದೊಂದಿಗೆ ಗಾಡ ಪ್ರಭಾವವನ್ನು ತೋರಿದರೆ ತಪ್ಪು ಕನ್ನಡದಮೇಲೆ ತುಳುವಿನ ಪ್ರಭಾವವನ್ನು ಕಾಣಬಹುದು.

ಒಂಟಿ ಕೊರಗದ ಪದಾದಿಯ ಪ ಕಾರವು ಮೂಡು ಕೊರಗ ಮತ್ತು ತಪ್ಪು ಕೊರಗದಲ್ಲಿ ಹ ಕಾರವಾಗಿದೆ.

| | ತಪ್ಪುಕೊರಗ | ಒಂಟಿಕೊರಗ | ಮೂಡುಕೊರಗ |
|---|---|---|---|
| ಕುಡಿ | ಪರ್ | ಹರ್ | ಹರ್ |
| ಓಡು | ಪಾರ್ | ಹಾರ್ | ಹಾರ್ |
| ಹಿಡಿ | ಪುಡ್ಡು | ಹುಡ | ಹುಡಿ |
| ಹುಲಿ | ಪಿಲಿ | ಹಿಲಿ | ಹಿಲಿ |
| ಹೋಗು | ಪೋ | ಹೋಗ | ಹೋ |

ತಪ್ಪು ಕೊರಗದಲ್ಲಿ ಬಳಕೆಯಲ್ಲಿ ಹಲವು ಪದಗಳು ತುಳುವಿನಿಂದ ಪ್ರಭಾವಿತಗೊಂಡಿದೆ.

ಹಾಗೂ ಹ್ ಕಾರ ಧ್ವನಿ ಪರಿವರ್ತನೆ ಇದೆ.

| | ತಪ್ಪುಕೊರಗ | ತುಳು |
|---|---|---|
| ಹಸಿ | ಹಜಿ | ಪಜಿ |
| ಚಾಪೆ | ಹಜೆ | ಪಜೆ |
| ಹರುವೆ | ಹದ್ದೆ | ಪದ್ದೆ |
| ಹಬ್ಬ | ಹರ್ಬ | ಪರ್ಬ |
| ದನ | ಹೆತ್ತ | ಪೆತ್ತ |

ಪೂರ್ವ ದ್ರಾವಿಡ ರಳ ಕಾರವು ಮೂಡುಕೊರಗದಲ್ಲಿ ಳ ಕಾರವಾಗಿಯೂ ಒಂಟಿ ಮತ್ತು ತಪ್ಪುಕೊರಗದಲ್ಲಿ ರ ಕಾರವಾಗಿಯೂ ಪರಿವರ್ತನೆಗೊಳ್ಳುತ್ತದೆ.

| | ಒಂಟಿಕೊರಗ | ಮೂಡುಕೊರಗ | ತಪ್ಪುಕೊರಗ |
|---|---|---|---|
| ಹುಳ | ಪುರಿ | ಹುಳ | ಹುರಿ |
| ಬೀಳು | ಬೂರು | ಬೂಳು | ಬೂರು |
| ಬಾಳೆ | ಬಾಕಿ | ಬಾಳೆ | ಬಾರೆ |
| ಮಳೆ | ಮರೆ | ಮಳೆ | ಮರೆ |

ಕೊರಗದ ಮೂರು ಉಪಭಾಷೆಗಳನ್ನು ಗಮನಿಸಿದಾಗ ಒಂದು ಇನ್ನೊಂದರಿಂದ ತೀರ ಭಿನ್ನವಾಗಿರುವುದು ಕಂಡುಬರುತ್ತದೆ. ಆಕೃತಿಯಾತ್ಮಕವಾಗಿ ತಪ್ಪುಕೊರಗವು ಉಳಿದೆರಡು ಭಾಷೆಗಳಿಗೆ ಸಂಬಂಧ ಕಲ್ಪಿಸುವ ಉಪಭಾಷೆಯಾಗಿ ಕಂಡುಬರುತ್ತದೆ.

ಕೊರಗ ಸಮುದಾಯ ತನ್ನದೇಯಾದ ವಿಶಿಷ್ಠ ಸಂಸ್ಕೃತಿಯನ್ನು ಹೊಂದಿರುವ ಸಮಾಜ. ಇವರು ಕಾಡಿನ ಮಕ್ಕಳು. ತಮ್ಮ ಮಕ್ಕಳಿಗೆ ಹೆಸರಿಡುವಾಗ ಪ್ರಾಣಿಪಕ್ಷಿಗಳ ಹೆಸರನ್ನು ಇಡುವುದು ವಿಶೇಷವಾಗಿದೆ. ನಕ್ಕುರ [ಎರೆಹುಳ], ಬೆಜಕ್ಕರ[ತರಗೆಲೆ], ತಬುರ [ಕೆಂಪು ಇರುವೆ], ಬಳುಂಬ [ಮೀನು], ಮೆಣ್ಕ [ಮಿಂಚುಹುಳ], ಪಿಜಿನ [ಇರುವೆ], ಬೊಗ್ಗುರ [ಗಂಡುನಾಯಿ] ಇವುಗಳಲ್ಲದೆ ಹುಟ್ಟಿದ ವಾರದ ಹೆಸರನ್ನು ಮಕ್ಕಳಿಗೆ ಇಡುತ್ತಾರೆ.

| | ಗಂಡು | ಹೆಣ್ಣು |
|---|---|---|
| ಆದಿತ್ಯವಾರ | ಐತ | ಐತು |
| ಸೋಮವಾರ | ಚೋಮ | ಚೋಮು |
| ಮಂಗಳವಾರ | ಅಂಗಾರ | ಅಂಗಾರೆ |
| ಬುಧವಾರ | ಬೂದ | ಬೂದು |
| ಗುರುವಾರ | ಗುರುವ | ಗುರುವಿ |
| ಶುಕ್ರವಾರ | ತುಕ್ರ | ತುಕ್ರಿ |
| ಶನಿವಾರ | ತನಿಯ | ತನಿಯಾರು |

ಈ ಸಮಾಜದ ಒಳಪ್ರಭೇದಗಳ ಹೆಸರುಗಳು ಸಾಂಸ್ಕೃತಿಕ ಹಿನ್ನಲೆಯನ್ನು ಹೊಂದಿರುವುದನ್ನು ಕಾಣಬಹುದು. ಆಂಡೆಯನ್ನು ಕಟ್ಟಿಕೊಂಡು ಕೊಂಡವರು ಆಂಡೆಕೊರಗರು, ಇವರು ಅಂಡೆಯನ್ನು ಕೊರಳಿಗೆ ಹಾಕಿಕೊಂಡಿರುತ್ತಾರೆ, ಉಗುಳು ಬಂದರೆ ಈ ಹಂಡೆಯಲ್ಲೇ ಉಗಿಯಬೇಕು ಹೊರಗೆ ಉಗಿಯುವಂತ್ತಿಲ್ಲ. ನೆಕ್ಕಿ ಸೊಪ್ಪನ್ನು ಹೆಣೆದು ದೇಹ ಮುಚ್ಚಿಕೊಳ್ಳುವವರು ಸೊಪ್ಪುಕೊರಗರು. ತೆಂಗಿನ ಚಿಪ್ಪನ್ನು ಕೊರಳಿಗೆ ಬಗಲಲ್ಲಿ ಧರಿಸುವವರು ಚಿಪ್ಪುಕೊರಗರು. ಸರ್ವಣೀಯರ ಸಾವು ಸಂಬಂಧಿಸಿದಾಗ ಹೆಣ ಮುಚ್ಚಿದ ಬಟ್ಟೆಯನ್ನು ಕೊರಗರಿಗೆ ಕೊಡುತ್ತಾರೆ. ಇದನ್ನು ಧರಿಸುವವರು ಕಪಡಕೊರಗರು. ಇಂದು ಕೊರಗರು ಈ ರೀತಿಯ ಸಾಂಸ್ಕೃತಿಕ ಜೀವನ ಅಳಿದು ನಾಗರೀಕರಂತೆ ಸಾಮಾನ್ಯ ಜೀವನಕ್ಕೆ ಹೊರಳುತ್ತಿದ್ದಾರೆ.

## ಗೊಂಡರ ಕನ್ನಡ

ಗೊಂಡ ಜನ ಸಮುದಾಯ ಭಾರತದ ಹಲವು ಪ್ರದೇಶಗಳಲ್ಲಿ ವಾಸಿಸುತ್ತಿರುವ ಸಮಾಜವಾಗಿದೆ. ಕರ್ನಾಟಕದಲ್ಲಿ ಬೀದರ್, ಗುಲ್ಬರ್ಗಾ, ಉತ್ತರಕನ್ನಡ ಜಿಲ್ಲೆಗಳು ಗೊಂಡರ ನೆಲೆಗಳಾಗಿವೆ. ಎಲ್.ಆರ್ ಹೆಗಡೆಯವರು ಬಟ್ಕಳ ತಾಲ್ಲೂಕಿನ ವೆಂಕಟಾಪುರ ಹೊಳೆಯ ಉತ್ತರ ಹಾಗೂ ದಕ್ಷಿಣಭಾಗದಲ್ಲಿ ಗೊಂಡರು ನೆಲೆಸಿದ್ದಾರೆಂದು ಅಭಿಪ್ರಾಯ ಪಡುತ್ತಾರೆ. ಶ್ರೀ ಯಾಜಿಯವರು ಶಿರಾಲಿಯ ಸುತ್ತಮುತ್ತ ಗೊಂಡರ ನೆಲೆಗಳಲ್ಲಿ ಗುರುತಿಸುತ್ತಾರೆ. ಒಟ್ಟಿನಲ್ಲಿ ಗೊಂಡರು ಕರ್ನಾಟಕದ ಬಟ್ಕಳ ತಾಲ್ಲೂಕು ದಕ್ಷಿಣಕನ್ನಡ ಜಿಲ್ಲೆಯ ಬೈಂದೂರು ತಾಲ್ಲೂಕು, ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕುಗಳಲ್ಲಿ ಹಂಚಿಹೋಗಿದ್ದಾರೆ.

ಗೊಂಡರು ಕರ್ನಾಟಕದ ಮೂಲನಿವಾಸಿಗಳೆ? ಇಲ್ಲವೆ ವಲಸೆ ಬಂದವರೆ? ಎಂಬ ವಿಚಾರ ಕುರಿತು ಜಿಜ್ಞಾಸೆ ಇದೆ. ಎಲ್.ಆರ್ ಹೆಗಡೆಯವರು ಮಧ್ಯ ಭಾರತದಲ್ಲಿಯೂ ಆಂಧ್ರಪ್ರದೇಶದಲ್ಲಿಯೂ ಇರುವ ಗೊಂಡರೆಂಬ ಹಿಂದುಳಿದ ಜನಾಂಗದವರೇ ಇಲ್ಲಿಗೆ ವಲಸೆ ಬಂದವರೆನ್ನುತ್ತಾರೆ. ಮತ್ತೊಮ್ಮೆ ಗೊಂಡರು ಕರ್ನಾಟಕದಿಂದಲೇ ಮಧ್ಯ ಪ್ರದೇಶಕ್ಕೆ ವಲಸೆ ಹೋಗಿರಬಹುದೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. [ಕರ್ನಾಟಕ ಬುಡಕಟ್ಟುಗಳು, ಎಲ್.ಆರ್ ಹೆಗಡೆ,ಪುಟ–1] ಶಾಂತಿನಾಯಕ್ ಅವರು ಗಾಮೊಕ್ಕಲಿನ ಒಂದು ಪಂಗಡವೇ ಗೊಂಡರು ಎನ್ನುತ್ತಾರೆ. [ಕರ್ನಾಟಕ ಬುಡಕಟ್ಟುಗಳು, ಶಾಂತಿನಾಯಕ್, ಪುಟ–155]

ಗೊಂಡ ಜನರು ಆಡುವ ಭಾಷೆಯೇ ಗೊಂಡ ಕನ್ನಡವಾಗಿದೆ ಗೊಂಡರು ಹುಟ್ಟು, ಸಾವು, ಮದುವೆ, ಆಹಾರ, ಹಬ್ಬ, ಅಡುಗೆ ಮೊದಲಾದ ಆಚಾರ ವಿಚಾರಗಳಲ್ಲಿ ತಮ್ಮದೆಯಾದ ಸಾಂಸ್ಕೃತಿಕ ವೈಶಿಷ್ಟ್ಯತೆಯನ್ನು ಹೊಂದಿದ್ದಾರೆ. ಕೆಲವು ನಿರ್ದಿಷ್ಟ ಸಾಂಸ್ಕೃತಿಕ ಆಚರಣೆಗಳು ಭಾಷಿಕ ಪರಿಸರದ ಮೇಲೆ ಪ್ರಭಾವ ಬೀರಿವೆ. ಗೊಂಡಜನಾಂಗದಲ್ಲಿ ಕುಪ್ಪ, ಕುಪ್ಪಿ ಹೆಸರಿನ ಜನರು ಅಧಿಕವಾಗಿದ್ದಾರೆ. ಇದಕ್ಕೆ ಕಾರಣ ಪದೇ ಪದೇ ಶಿಶು ಮರಣ ರೋಗಗಳಿಗೆ ಒಳಗಾಗುತ್ತಿದ್ದರೆ ಅದರ ನಿವಾರಣೆಗಾಗಿ ಕುಪ್ಪಿ ಆಚರಣೆ ಮಾಡುತ್ತಾರ? ಈ ಆಚರಣೆಯಲ್ಲಿ ಭಾಗಿಯಾದ ಗಂಡು ಶಿಶುವಿಗೆ ಕುಪ್ಪ ಎಂದರೆ, ಹೆಣ್ಣು ಶಿಶುವಿಗೆ ಕುಪ್ಪಿ ಎಂದು ಹೆಸರಿಡುತ್ತಾರೆ. ಗೊಂಡರು ದೇವರ, ಹಿರಿಯರ, ಹುಟ್ಟಿದ ವಾರದ ಹೆಸರುಗಳನ್ನು ಇಡುತ್ತಾರೆ. ಸೋಮ–ಸೋಮಿ, ಮಂಗಳ–ಮಂಗಳಿ, ಬುಡ್ಡ–ಬುಡ್ಡಿ, ಸುಕ್ರ–ಸುಕ್ರಿ, ತಿಮ್ಮ–ತಿಮ್ಮಿ, ಬಡಕ–ಬಡಕಿ, ಮಾಸ್ತಿ–ಮಾಸ್ತಿ, ಮಳ್ಳ–ಮಳ್ಳಿ.

ಧಾರ್ಮಿಕ ಆಚರಣೆಯು ಗೊಂಡ ಜನಜೀವನದ ಅವಿಭಾಜ್ಯ ಅಂಗವಾಗಿದೆ. ಕೃಷಿ, ಪಶು, ಆನಾರೋಗ್ಯ ನಿವಾರಣೆಗೆ ಸಂಬಂಧಿಸಿದಂತೆ ಈ ಆಚರಣೆಗಳಿವೆ. ಈ ಆಚರಣೆಗಳನ್ನು ಹೆಸರಿಸುವ ಅದೃಶ್ಯ ಶಕ್ತಿಗಳ ಹೆಸರು ಸಾಂಸ್ಕೃತಿಕ ಹಿನ್ನಲೆಯನ್ನು ಹೊಂದಿದೆ. ಗಾಳಿಮಾರಿ, ಕಾಲರಮಾರಿ, ಪ್ಲೇಗ್‌ಮಾರಿ, ಬಿಳಿಯಮ್ಮ, ಕರಿಯಮ್ಮ, ಹುಗುಳಮ್ಮ ಮೊದಲಾದ ದೇವರನ್ನು ಆರಾಧಿಸುತ್ತಾರೆ.

ಗೊಂಡರಲ್ಲಿ ಹನ್ನೆರಡು ತಿಂಗಳಿಗೆ ವಿಶೇಷ ಹೆಸರುಗಳಿವೆ. ಇವುಗಳು ತುಳು ಭಾಷಾ ಪ್ರಭಾವದಿಂದ ಬಂದವು ಎಂಬುದನ್ನು ಶಾಂತಿನಾಯಕ ಅವರು ಗುರುತಿಸುತ್ತಾರೆ. [ಕರ್ನಾಟಕದ ಬುಡಕಟ್ಟುಗಳು, ಶಾಂತಿನಾಯಕ, ಪು–185]

| ಗೊಂಡರ ಕನ್ನಡ | ಕುಂದಾಪುರ ಕನ್ನಡ | ತುಳು |
|---|---|---|
| ಅಂತೇಸಿ | ಹಂಚೋಸಿ | ಪೆರಾರ್ದೆ |
| ಬರ್ರಾತ | ಬಾರಾತ್ | ಪುಯಿಂತೆಲ್ |
| ಹೆರಿಸುಗ್ಗಿ | ಹೆರಿಸುಗ್ಗಿ | ಮಾಯಿ |
| ಕಿರ್ಸುಗ್ಗ | ಕಿರಿಸುಗ್ಗಿ | ಸಂಗ್ಲಿ |
| ಹಗ್ಗು | ಹಗ್ಗು | ಪಗ್ಗು |
| ಬ್ಯಾಸ್ಗೆ | ಬೇಸಿಗೆ | ಬೇಶ |
| ಕಾರು | ಕಾರ್ | ಕಾರ್ಕೆಲ |
| ಅಸಾಡಿ | ಆಶಾಡಿ | ಆಟಿ |
| ಸೋಣೆ | ಸೋಣಿ | ಶೋಣಿ |
| ಮಾಗೀ | ಕನ್ನೀ | ನಿರ್ದಾಲಿ |
| ದೀವಳ್ಗಿ | ದಿವಾಳಿ | ಬೊಂತೆಲ |
| ಕೊಡಿ | ಕೊಡಿ | ಚಾರ್ದೆ |

ಗೊಂಡ ಕನ್ನಡದಲ್ಲಿ ಒ ಕಾರ ಆದಿಯಾದ ಕೆಲ ಶಬ್ದಗಳು ವ ಕಾರವಾಗುತ್ತವೆ.

| | |
|---|---|
| ಒಂದಲ್ಲಾ>ವಂದಲ್ಲಾ | ಒನಕೆ>ವನಕಿ |
| ಒಟ್>ವಟ್ | ಒಟ್ಟಾಗಿ>ವಟ್ಟಾಗಿ |
| ಓಡಿ>ವೋಡಿ | ಓಲೆ>ವಾಲೀ |

ಕೆಲವು ಶಬ್ದಗಳು ಅನುಸ್ವಾರವನ್ನು ಪಡೆಯುತ್ತವೆ.

ಅವ>ಅಂವ　　ಇವ>ಇಂವಾ

ಹಾಗೇ>ಹಾಂಗೇ　　ತನಗೆ>ತಂಗೆ

ಕೆಲವು ಶಬ್ದಗಳಲ್ಲಿ ಐ ಸ್ವರದ ಬದಲು ಅಯ್ ಬಳಕೆಯಾಗುತ್ತದೆ.

ಬೈತಾಳ>ಬಯತಾಳ　　ಕೈಯಲ್ಲಿ>ಕಯ್ಲ್ಲ್, ಕಯ್ಲಿ

ಮೈದ್ನ>ಮಯ್ದೀನಾ　　ಬೈದಾನೆ>ಬಯದಾನೆ

ಕೆಲವು ಶಬ್ದಗಳಲ್ಲಿ ಒ ಕಾರಕ್ಕೆ ಬದಲಾಗಿ ಊ ಕಾರ ಬರುತ್ತದೆ.

ತಪ್ಪೋಕಾಗೋದಿಲ್ಲ>ತಪ್ಪೂಕಾಗೂದಿಲ್ಲ　　ಸುರಿಯೋದು>ಸುರೂದು

ಕುಡಿಯೋದು>ಕುಡೂದು　　ಕೊಡೋದಿಲ್ಲ>ಕೂಡೂದಿಲ್ಲ

ಬರೋದೆ>ಬಪ್ಪೂದೆ　　ಕಲಿಯೋಕೆ>ಕಲೂಕ್

ಕೆಲವು ಶಬ್ದಗಳಲ್ಲಿ ಎ ಕಾರಕ್ಕೆ ಬದಲಾಗಿ ಇ ಕಾರ ಸಿದ್ಧಿಸುತ್ತದೆ.

ದೊರೆಮಗ>ದೊರಿಮಗ　　ಹೆಂಡತಿ>ಹಿಣ್ತೀ

ಅತ್ತೆ>ಅತ್ತಿ　　ಹೆರಿಗೆ>ಹೆರ್ಗಿ

ರವಕೆ>ರವಕಿ　　ತಲೆ>ತಲಿ

ಹೊಟ್ಟೆ>ಹೊಟ್ಟೀ　　ಚಿಂತೆ>ಚಿಂತಿ

ಕೆಲವು ಶಬ್ದಗಳ ಪದಾಂತ್ಯವು ಅಂಬ್ರ ಎಂಬ ರೂಪವನ್ನು ಪಡೆಯುತ್ತವೆ.

ಸತ್ತಂಬ್ರಲ್ಲಿ, ಆಯ್ತಂಬ್ರು, ಹೋದ್ನಂಬ್ರು, ಅಂತಂಬ್ರು, ಹೋತರಂಬ್ರು, ಕೇಳ್ರಂಬ್ರು

ಕೆಲವು ಶಬ್ದಗಳು ಉ ಸ್ವರಾಂತ್ಯಕ್ಕೆ ಬದಲಾಗಿ ಆ ಕಾರಾಂತವಾಗುತ್ತವೆ.

ಹಿಡಿದು>ಹಿಡ್ದಾ　　ಏರ್ಕಂಡು>ಏರ್ಕಂಡಾ

ವಸ್ತು>ವಸ್ತಾ

ಕೆಲವು ಶಬ್ದಗಳ ಅಂತ್ಯವು ದೀರ್ಘಸ್ವರದಿಂದ ಕೂಡಿರುತ್ತದೆ.

ಬಂದ> ಬಂದಾ　　ಅದೆಂತ>ಅದೆಂತಾ

ಹೋದ>ಹೋದಾ　　ಬರುತ್ತ>ಬತ್ತಾ

ಅದ>ಅದ್ಯಾ　　ರಾಜ>ರಾಜಾ

ಗಂಡ>ಗಂಡಾ　　ಮಾಡ್ತ>ಮಾಡ್ತಾ

ಕೆಲವು ಶಬ್ದಗಳಲ್ಲಿ ಳ ಕಾರಾಂತವಿರುವ ಶಬ್ದಗಳು ಒತ್ತಕ್ಷರವಾಗಿ ಬದಲಾಗುತ್ತವೆ.

ಮಾಡಳು>ಮಾಡ್ಳು　　ಒಗೆದಳು>ಒಗದ್ಳು　　ಕೇಳಿದಳು>ಕೆಳ್ಳು

ಅಂದಳು>ಅಚಿತು ಮಾಡುತ್ತಲೇ>ಮಾಡುತ್ಳು ಕೊಡುತ್ತಲೇ>ಕೊಡುತ್ಳು

ಅಬ್ಬಿಗೋದಳು>ಅಬ್ಬಿಗೋದ್ಳು ಮೆಟ್ಟುತ್ತಲೆ>ಮೆಟ್ಟುತ್ಳು

ಕೆಲವು ಶಬ್ದಗಳಲ್ಲಿ ಶ ಕಾರ ಸ ಕಾರವಾಗಿ ಪರಿವರ್ತನೆಯಾಗುತ್ತದೆ.

ಶುರು>ಸುರು ಶಾಲೀಗ್>ಸಾಲೀಗ್ ಅಕ್ಷರ>ಅಕ್ಸರ

ರಾಶಿ>ರಾಸಿ ಶಿವ>ಸಿವ ಮನುಷ್ಯ>ಮನ್ಸ

ವರ್ಷ>ವರ್ಸ

ಕೆಲವು ಶಬ್ದಗಳಲ್ಲಿ ಅಕ್ಷರ ಲೋಪವಾಗುವುದರೊಂದಿಗೆ ಆ ಸ್ಥಾನದಲ್ಲಿ ಒತ್ತಕ್ಷರಗಳು ಉಂಟಾಗುತ್ತವೆ.

ಕರಿಮುಗಿಲಾಗೆ>ಕರಿಮುಗ್ಲಾಗೆ ತಿರುಗಿದಾ>ತಿರ್‌ಗ್ದಾ

ಹೇಳಿದರಂತೆ>ಹೇಳ್ರಂತೆ ಮಕ್ಕಳ>ಮಕ್ಳ

ಕರೆದುಕೊಡುಬಂದ>ಕರ್ಕಾಬಂದ ಊರಿಗೆ>ಊರ್ಗೆ

ಜನನೂ>ಜನ್ನು ಮಾಡಿತು>ಮಾಡ್ತು

ಹುಡುಗಿ>ಹುಡ್ಗಿ

ಕೆಲವು ಶಬ್ದಗಳಲ್ಲಿ ಷ ಕಾರ ಟ ಕಾರವಾಗಿ ಬರುತ್ತದೆ.

ಅಷ್ಟು>ಅಟ್ಟು ಇಷ್ಟು>ಇಟ್ಟು ಅಷ್ಟೆ>ಅಟ್ಟೆ

ಕೆಲವು ಶಬ್ದಗಳಲ್ಲಿ ರ ಕಾರಂತವಾದ ಕೆಲವು ಶಬ್ದಗಳಲ್ಲಿ ರ ಕಾರ ಲೋಪವಾಗುತ್ತದೆ.

ಇದ್ದರು>ಇದ್ರ್ ಕುದುರೆ>ಕುದ್ರಿ ಹುಡುಗರು>ಹುಡುಗ್ರ್

ಗೊಂಡರ ಕನ್ನಡದಲ್ಲಿ ಪ್ರತ್ಯೇಕ ಏಕವಚನ ಪ್ರತ್ಯಯಗಳಿಲ್ಲ. ದಿರ್, ಅರ್ ಬಹುವಚನ ಪ್ರತ್ಯಯಗಳಿವೆ. ಅತ್ತಿಗೆದೀರು, ಅಕ್ಕಾದೀರು, ಹುಡ್ಗಿರು, ಬರುವರು. ಸರ್ವನಾಮಗಳಲ್ಲಿ ಪ್ರಥಮ ಪುರುಷ ಸರ್ವನಾಮಗಳು ಆನ, ಅವ ಆಗಿವೆ. ಸ್ತ್ರೀಲಿಂಗದಲ್ಲಿ ಆಳ, ಅವ್ಳ ಎಂಬುವು ಬಳಕೆಯಲ್ಲಿವೆ. ಗೊಂಡ ಕನ್ನಡದಲ್ಲಿ ಪುಲ್ಲಿಂಗ, ನಪುಂಸಕ ಲಿಂಗಗಳ ನಡುವೆ ಸ್ಪಷ್ಟವ್ಯತ್ಯಾಸಗಳಿವೆ ಆದರೆ ಸ್ತ್ರೀ ಲಿಂಗ ನಪುಂಸಕಲಿಂಗದಲ್ಲೇ ಐಕ್ಯವಾಗುತ್ತದೆ.

ಕುಂಬಾರ್ತೀ ಹೋಯ್ತು, ಆಹುಡ್ಗಿ ಹೇಳ್ತಂತೆ, ಅಜ್ಜಿ ಹೋತಂಬ್ರು , ಅತ್ತೆ ಹೇಳ್ತದೆ

ಗೊಂಡಕನ್ನಡದಲ್ಲಿ ದ್ವಿತಿಯಾ ವಿಭಕ್ತಿ ಬದಲಿಗೆ ಪದವೇ ವ್ಯಂಜನಾಂತವಾಗುತ್ತದೆ.

ದನ ಹಾಲ್ ಕೂಡೂದಿಲ್ಲೆ >ದನ ಹಾಲುನ್ನು ಕೊಡೋದಿಲ್ಲ

ನನ್ ಹಿಣ್ತೀನ್ ಮತ್ತೆ ಬಂದಾಗ್ ಸಾಕ್ಬೇಕು> ನನ್ನ ಹೆಂಡತಿಯನ್ನು ಮತ್ತೆ ಬಂದಾಗ ಸಾಕಬೇಕು

ಚತುರ್ಥಿ ವಿಭಕ್ತಿಗೆ ಗೆ ಬದಲಾಗಿ ಗ್ ವಿಭಕ್ತಿ ಪ್ರತ್ಯಯ ಬರುತ್ತದೆ.

ಮನಿಗ್ ತಕಾ ಬಂದ್ಕಂಡಿ, ದಂಡಿಗ್ ಹೋಂದಂವಾ ಬರ್ಲಿಲ್ಲೆ,

ಸಪ್ತಮಿ ವಿಭಕ್ತಿ ಪ್ರತ್ಯಯ ಕೆಲವೊಮ್ಮೆ ಬಳಕೆಯಾಗುವುದಿಲ್ಲ.

ಆ ಬಾವಿಲ್ ಮಕ್ಳು ಕೂಗ್ತಾರೆ, ಇಂವಾ ಹೋದ್ಲೂಕ್ಡಲ್ಲೆ ಹೊಟ್ಟೆ ಶರ್ಕಿ ಸುರುವಾತದೆ.

ನಿಷೇದಾರ್ಥಕ ಕ್ರಿಯಾಪದ ಇಲ್ಲೆ ಎಂಬ ರೂಪದೊಂದಿಗೆ ಬರುತ್ತದೆ.

ಗೊತ್ತೀರೂ ದಿಲ್ಲೆ, ಬರ್ಲಿಲ್ಲೆ, ಗೊತ್ತಿಲ್ಲೆ, ತರ್ಲಿಲ್ಲೆ

ಗೊಡರ ಕನ್ನಡದಲ್ಲಿ ಹಲವು ಪಾರಿಭಾಷಿಕ ಪದಗಳಿವೆ.

ಆಸರ [ನೀರಡಿಕೆ], ಅಲಿಗಡೆ [ಅತ್ತಕಡೆ], ಎಣ್ಣೆಗೆಂಟು [ಕೂದಲಮುಡಿ], ಕಳಾ [ಕಳವು], ಕೆಂಬ್ರಿ [ಬುಟ್ಟಿ], ಗಂಟಿ [ದನ], ಚೋಜು [ತೊಟ್ಟಿಲು], ನಿಕ್ಕಿ[ನಿಶ್ಚಯ], ಸಾಲಗ [ಜೇಡ], ಮಾಡಲು [ತೆಂಗಿನ ಎಲೆ], ಕುಪ್ಪ [ಹೊಂಡ], ಗರಸು [ಹುಡುಕು], ತೆರಣಿಲ್ಲ [ಸಮಯವಿಲ್ಲ]

## ಕರೆ ಒಕ್ಕಲರ ಕನ್ನಡ

ಉತ್ತರ ಕನ್ನಡ ಜಿಲ್ಲೆಯ ಅಂಕೋಲ, ಕುಮುಟಾ, ಶಿರಸಿ, ಯಲ್ಲಾಪುರ, ಸಿದ್ದಾಪುರ ತಾಲ್ಲೊಕುಗಳಲ್ಲಿ ಮತ್ತು ಶಿವಮೊಗ್ಗ ಜಿಲ್ಲೆಯ ಸೊರಬ ಸಾಗರ ಹೊಸನಗರ ತೀರ್ಥಹಳ್ಳಿ ತಾಲ್ಲೋಕುಗಳಲ್ಲಿ ಕರೆ ಒಕ್ಕಲರು ನೆಲೆಸಿದ್ದಾರೆ. ಕರೆ ಎಂಬ ಪದಕ್ಕೆ ಕಪ್ಪು, ದಡ ಎಂಬ ಎರಡು ಅರ್ಥಗಳಿವೆ. ಒಕ್ಕಲು ಎಂದರೆ ವ್ಯವಸಾಯ. ಹೊಳೆದಂಡೆಯಲ್ಲಿ ಮಲೆನಾಡಿನ ಬೆಟ್ಟಗುಡ್ಡಗಳ ನಡುವೆ ಒಕ್ಕಲುತನ ಕೈಗೊಂಡ ಇವರನ್ನು ಕರೆ ಒಕ್ಕಲರು ಎಂಬುದಾಗಿ ಕೆಲ ವಿದ್ವಾಂಸರು ಹೇಳುತ್ತಾರೆ. ಕಪ್ಪು ವರ್ಣದವರಾದ ಇವರನ್ನು ಕರಿ ಒಕ್ಕಲರು ಎಂದು ಕರೆದಿರುವ ಸಾಧ್ಯತೆಗಳಿವೆ. ಕರೆ ಒಕ್ಕಲರು ಮಾತನಾಡುವ ಕನ್ನಡವೇ ಕರೆ ಒಕ್ಕಲರ ಕನ್ನಡ. ಇದು ಕನ್ನಡದ ಒಂದು ಸಾಮಾಜಿಕ ಉಪಭಾಷೆಯಾಗಿದೆ.

ಕೃಷಿಕರಾದ ಕರೆ ಒಕ್ಕಲರಲ್ಲಿ ಭೂಮಿ ಹುಣ್ಣಿಮೆ ವಿಶಿಷ್ಟಹಬ್ಬ. ಭತ್ತದ ಬೆಳೆ ಫಲವತ್ತಾಗಿ ಬಂದಾಗ ಭೂಮಿ ತಾಯಿಗೆ ಮಾಡುವ ಸೀಮಂತವೇ ಈ ಸುಗ್ಗಿ ಹಬ್ಬ. ಇಂತಹ ಭೌತಿಕ ಸಂಸ್ಕೃತಿಯನ್ನು ಬೌದ್ಧಿಕ ರೂಪದ ಭಾಷೆ ತಲೆಮಾರಿನಿಂದ ತಲೆಮಾರಿಗೆ ಸಾಗಿಸಿಕೊಡು ಬಂದಿದೆ. ಕರೆ ಒಕ್ಕಲರ ಆಡುಮಾತು ಸುಂದರವಾಗಿದೆ. ಹಬ್ಬ, ಮದುವೆ, ಹುಟ್ಟು, ಸಾವು, ಸಂಸ್ಕಾರದಲ್ಲಿ ಸರಳ ಕನ್ನಡದಲ್ಲಿಯೇ ಆರ್ಶೀವಾದ, ಹರಕೆ, ಹಾರೈಕೆ ಹೇಳಿವ ವಿಶಿಷ್ಟ ಸಂಸ್ಕೃತಿ ಇವರಲ್ಲಿದೆ. ಮದುವೆ ಸಂದರ್ಭದಲ್ಲಿ ಪೌರೋಹಿತ್ಯವಹಿಸುವವರು ಇವರೇ, ಒಬ್ಬ ಕರೆ ಒಕ್ಕಲರ ವ್ಯಕ್ತಿ ಹೆಣ್ಣಿನ ಕೈಯನ್ನು ಗಂಡಿನ ಕೈಯಲ್ಲಿ ಇಡುತ್ತಾ ' ನಮ್ಮ ಹುಡುಗಿ ಏನೂ ತಿಳಿಯದವಳು.

ಕೆಲಸಮಾಡಿ ಗೊತ್ತಿಲ್ಲದವಳು, ಕರಿ ಗಡಿಗೇಲಿ ಬಿಳಿ ಅಕ್ಕಿ ಬೇಯಿಸಿ ಅರಿಯಳು. ಇಂಥ ಹೆಣ್ಣಿಗೆ ನೀವೇ ತಂದೆ ತಾಯಿ ಆಗಿ ತಲೆ ತುಂಬಾ ಎಣ್ಣೆ ಕೊಟ್ಟು ಭುಜ ತುಂಬಾ ಕುಪ್ಪಸ ಕೊಟ್ಟು ಮೈತುಂಬಾ ಶಾಲೆ ಕೊಟ್ಟು ಯಾವ ಯಾವ ಕಾಲಕ್ಕೆ ಏನೇನು ಬೇಕೋ ಅದನ್ನೆಲ್ಲಾ ಕೊಟ್ಟು ನಿಮ್ಮ ಹುಡುಗನ ಹಾಗೇ ಕಾಪಾಡಿಕೊಂಡು ಬರಬೇಕು.' (ಕರ್ನಾಟಕ ಬುಡಕಟ್ಟುಗಳು, ಆರ್.ಪಿ ಹೆಗಡೆ, ಪು–442) ಇಲ್ಲಿ ಕರೆ ಒಕ್ಕಲರ ಸಂಸ್ಕೃತಿ ಮಾತಿನ ಮೂಲಕ ಸುಂದರ ಅಭಿವ್ಯಕ್ತಿಯನ್ನು ಪಡೆದಿರುವುದನ್ನು ಕಾಣಬಹುದು.

ಕರೆ ಒಕ್ಕಲರ ಕನ್ನಡದಲ್ಲಿ ಕೆಲವು ಶಬ್ದಗಳ ಶ ಕಾರ ಸ ಕಾರವಾಗುತ್ತದೆ.

ಶಬ್ದ>ಸಬ್ದ, ಶಾಲು>ಸಾಲು, ಶಾಲೆ>ಸಾಲೆ, ಶಂಬು>ಸಂಬು, ಶಂಕರ>ಸಂಕರ

ಕೆಲವು ಶಬ್ದಗಳಲ್ಲಿ ಸ ಕಾರವು ಶ ಕಾರವಗಿ ಪರಿವರ್ತನೆಯಾಗುತ್ತದೆ.

ಸೀರೆ>ಶೀರೆ, ಸಣ್ಣ>ಶಣ್ಣ, ಸಂಕ>ಶಂಕ, ಸಸಿ>ಶಶಿ

ಕೆಲವು ಶಬ್ದಗಳಲ್ಲಿ ಕ ಕಾರವು ಚ ಕಾರವಾಗಿ ಪರಿವರ್ತನೆಯಾಗಿದೆ.

ಕ್ಷಣ>ಚಣ, ಕ್ಷೌರ>ಚೌರ, ಕ್ಷತ್ರಿಯ>ಚತ್ರಿಯ

ಕರೆ ಒಕ್ಕಲರ ಕನ್ನಡದಲ್ಲಿ ಮಹಾಪ್ರಾಣಗಳಿಲ್ಲ.

ಖಡ್ಗ>ಕಡ್ಗ, ವಿಠ್ಠಲ>ಇಟ್ಟಲ>ಇಟ್ಲ, ಫಲ>ಪಲ, ಘಂಟೆ>ಗೆಂಟೆ

ಕೆಲವು ಶಬ್ದಗಳಲ್ಲಿ ಮಧ್ಯಪದದ ರ ಕಾರ ಲಯವಾಗಿ ವಿರಳವಿದ್ದುದು ಒತ್ತಾಗಿ ಬರುತ್ತದೆ.

ಕುರುಡ>ಕುಲ್ಡ, ಎರಡು>ಎಲ್ಡು, ಬುರುಡೆ>ಬುಲ್ಡೆ, ಹೊರಡು>ಹೊಲ್ಡು, ಮೈದುನ>ಮೈದ್ನ, ನಾದಿನಿ>ನಾದ್ನಿ, ಹಾಸಿಗೆ>ಹಾಸ್ಗೆ, ಹುಡುಗ>ಹುಡ್ಗ

ಕೆಲವು ಶಬ್ದಗಳಲ್ಲಿ ಒತ್ತಕ್ಷರ ಪದಗಳು ವಿರಳವಾಗಿ ಬರುವುದು.

ದ್ರವ್ಯ>ದಶೇವು, ಹುಣ್ಣಿಮೆ>ಹುಣ್ಮೆ

ಕೆಲವು ಶಬ್ದಗಳ ಉಚ್ಚಾರಣೆಯಲ್ಲಿ ವ್ಯತ್ಯಾಸವನ್ನು ಹೊಂದಿವೆ.

ಕೆಂಪು>ಕೆಪಿ, ಮೋಡ>ಮಾಡ, ದೊಡ್ಡದು>ದಡ್ಡದು, ಹೆಂಡತಿ>ಹೆಣ್ತಿ, ಕಪ್ಪೆ>ಕೆಪ್ಪೆ, ಜನ್ಮ>ಜಲ್ಮ, ಇಲಿ>ಯಲಿ, ಸೊಪ್ಪು>ಸಪ್ಪು

ಕೆಲವು ಶಬ್ದಗಳಲ್ಲಿ ಗೌರವ ಸೂಚಕ ಬಹುವಚನ ಪ್ರತ್ಯವಾಗಿ ಅಣಿ ಎಂಬುದನ್ನು ಬಳಸುತ್ತಾರೆ.

ಅಪ್ಪ>ಅಪ್ಪಾಣಿ, ಅಕ್ಕ>ಅಕ್ಕಾಣಿ, ಅವ್ವ>ಅವ್ವಾಣಿ, ಅಣ್ಣ>ಅಣ್ಣಾಣಿ

ಕರೆ ಒಕ್ಕಲರ ಕನ್ನಡದಲ್ಲಿ ಸ್ತ್ರೀಲಿಂಗ ನಪುಂಸಕಲಿಂಗದಲ್ಲಿ ಸೇರಿಹೋಗುತ್ತದೆ.

ಪುಲ್ಲಿಂಗ– ಅವ ಬಂದಾನೆ,

ಸ್ತ್ರೀಲಿಂಗ– ಅದು ಬಂದೈತೆ

ನಪುಂಸಕಲಿಂಗ– ಅದು ಬಂದೈತೆ

ಕರೆ ಒಕ್ಕಲರ ಕನ್ನಡದಲ್ಲಿ ಕೆಲವು ವಾಕ್ಯಪ್ರಯೋಗಗಳು ವಿಶೇಷವಾಗಿದೆ.

ನೀವು ಬನ್ನಿ> ನೀವ್ ಬರ್‍ರಾ,

ನಾನು ಬರುವುದಿಲ್ಲ> ನಾ ಬರಾಲಾ,

ನೀನು ತೆಗೆದುಕೊಂಡು ಬಾ>ನೀ ತಕೊಂಬಾ

ಕೆಲವು ಶಬ್ದಗಳಲ್ಲಿ ಒ ಕಾರದ ಬದಲಿಗೆ ವ ಕಾರ ಬರುತ್ತದೆ.

ಒಂದು>ವಂದು, ಒಕ್ಕಲು>ವಕ್ಲು, ಒಳ್ಳೆ>ವಳ್ಳೆ, ಒಳಗಿಂದು>ವಳಗಿಂದು

ಕೆಲವು ಶಬ್ದಗಳಲ್ಲಿ ಅಂತ್ಯದಲ್ಲಿ ಬರುವ ರ ಕಾರ ಒತ್ತಕ್ಷರವಾಗಿ ಪರಿವರ್ತನೆಗೊಳ್ಳುತ್ತದೆ.

ಬಿದಿರು>ಬಿದ್ರ, ಹತ್ತಿರ>ಹತ್ರ, ಕೊಟ್ಟರು>ಕೊಟ್ರು, ಕರೆದರು>ಕರದ್ರು, ಹೋದರು>ಹೋದ್ರು, ಹತ್ತಿರ>ಹತ್ರ

ಕೆಲವು ಶಬ್ದಗಳಲ್ಲಿ ಪದಮಧ್ಯದಲ್ಲಿ ದೀರ್ಘಸ್ವರ ಬರುತ್ತದೆ.

ಬಾಯಿಗೆ>ಬಾಯೀಗೆ, ಅವರಿಗೆ>ಅವರೀಗೆ, ಹುಲಿನೂ>ಹುಲೀನೂ, ಇದ್ದಲ್ಲಿಗೆ>ಇದ್ದಲೀಗೆ

ಕೆಲವು ಶಬ್ದಗಳಲ್ಲಿ ಎ ಕಾರ ಇ ಕಾರವಾಗಿ ಬದಲಾಗುತ್ತದೆ.

ತಿಂತೇನಿ>ತಿಂತೀನಿ, ಕೊಡ್ತೇನಿ>ಕೊಡ್ತೀನಿ, ಮನೆಗೆ>ಮನಿಗಿ, ಬತ್ತೇನಿ>ಬತ್ತೀನಿ

ಕರೆ ಒಕ್ಕಲರ ಕನ್ನಡದಲ್ಲಿ ಭೂತಕಾಲ ಸೂಚಕ ಪ್ರತ್ಯಯ ದ್ ಆಗಿದೆ. ವರ್ತಮಾನ ಮತ್ತು ಭವಿಷ್ಯತ್ ಕಾಲದಲ್ಲಿ ತ್ ಪ್ರತ್ಯಯ ಬರುತ್ತದೆ.

ಭೂತಕಾಲ– ಪು, ಅವ ಬಂದಾನೆ

ಸ್ತ್ರೀ, ಅದು ಬಂದೈತೆ

ನ, ಅದು ಬಂದೈತೆ

ವರ್ತಮಾನ ಕಾಲ– ಪು, ಅವ ಹೊತಾನೆ

ಸ್ತ್ರೀ, ಅದು ಹೋತ್ತೈತೆ

ನ, ಅದು ಹೋತ್ತೈತೆ

ಭವಿಷ್ಯತ್ ಕಾಲ – ಪು, ಅಂವ ಬಂತಾನೆ

ಸ್ತ್ರೀ, ಅದು ಬತ್ತೈತೆ

ನ, ಅದು ಬತ್ತೈತೆ

ಕರೆ ಒಕ್ಕಲರ ಕನ್ನಡದಲ್ಲಿ ಕೆಲವು ವಿಶೇಷ ಶಬ್ದಗಳಿವೆ.

ತಾರಕ್ಲು [ನಕ್ಷತ್ರ], ತಿಂಗಳ [ಚಂದ್ರ], ಹಿಳ್ಳೆ [ಮಗು], ಇಂಗಾಳ [ಕೆಂಡ], ಕಾಲ್ನೆಡೆ [ದನಕರು], ಶೀರ್ಲು [ಜಲಪಾತ], ಕೇಲ್ [ನೀರು ಅಂಡೆ], ಗುನುಗ [ಪುರೋಹಿತ], ಗಾಡಿಗ [ಮಂತ್ರವಾದಿ], ಬಳಿ [ಕುಲ], ಇತ್ಯಾದಿ.

## ಜೇನು ಕುರುಬರ ಕನ್ನಡ

ಜೇನು ಕುರುಬರದು ಒಂದು ಬುಡಕಟ್ಟು ಸಮುದಾಯ. ಈ ಸಮುದಾಯದ ಜನರು ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆ, ಮಡಿಕೇರಿ, ಹುಣಸೂರು ತಾಲ್ಲೋಕು, ಕೊಡಗಿನ ಕುಶಾಲನಗರ, ಸೋಮವಾರ ಪೇಟೆ, ತಮಿಳುನಾಡಿನ ನೀಲಗಿರಿಯ ನಡುಮಲೆ. ಕೇರಳದ ಮಾನಂದವಾಡಿಯಲ್ಲಿ ನೆಲೆಸಿದ್ದಾರೆ, ಜೇನು ಕುರುಬರು ಮಾತನಾಡುವ ಕನ್ನಡವೇ ಜೇನು ಕುರುಬ ಕನ್ನಡ. ಇವರಲ್ಲಿ ಬೆಟ್ಟ ಕುರುಬ, ಕಾಡು ಕುರುಬ, ಎಂಬ ಒಳ ಪ್ರಭೇದಗಳಿವೆ. ಇವರದು ಜೇನನ್ನು ಸಂಗ್ರಹಿಸುವುದು ಮುಖ್ಯವೃತ್ತಿಯಾಗಿದೆ.ಜೊತೆಗೆ ಕಾಡಿನೊಳಗೆ ಕಮರಿ ಬೇಸಾಯ ಮಾಡಿ ರಾಗಿ ಗೆಣಸುಗಳನ್ನು ಬೆಳೆಯುತ್ತಾರೆ.

ಜೇನು ಕುರುಬರು ವಿಶೇಷ ಗ್ರಹಣ ಶಕ್ತಿ ಹೊಂದಿರುವರು. ಇವರು ಗಾಳಿತಪ್ಸೋದು ಎನ್ನುವ ಕ್ರಿಯೆಯಲ್ಲಿ ತಮ್ಮ ಇರುವಿಕೆಯ ಗಾಳಿ ಆನೆ ಇತರೆ ಪ್ರಾಣಿಗಳಿಗೆ ಮುಟ್ಟಸದಂತೆ ಗಾಳಿ ಬೀಸುವ ದಿಕ್ಕು ಹಿಡಿದು ಗುರುತಿಸಿ ಬೇರೊಂದು ದಿಕ್ಕಿನಿಂದ ಚಲಿಸುತ್ತಾರೆ. ಇವರು ಜೇನು ಹುಟ್ಟಿನ ಬಗ್ಗೆ ವಿಶೇಷ ಜ್ಞಾನ ಉಳ್ಳವರು. ಜೇನುಗಳ ಹಾರಾಟದಿಂದಲೇ ಜೇನು ಹುಟ್ಟನ್ನು ಗುರುತಿಸ ಬಲ್ಲರು 'ಜೇನೆ ನೀ ಹೋಗೋದು ಒಂದೇ ದಾರಿ ಬರೋದು ದಿಕ್ಕಾಪಾಲು' ಎಂಬ ಮಾತು ಜೇನನ್ನು ಕುರಿತ ಅವರ ತಿಳುವಳಿಕೆಯನ್ನು ಹೇಳುತ್ತದೆ.

ಜೇನು ಕುರುಬ ಕನ್ನಡದಲ್ಲಿ ಕೆಲವು ಶಬ್ದಗಳ ಹ ಕಾರವು ಲೋಪವಾಗಿ ಅ, ಓ, ಎ ಕಾರಾದಿಯಾಗಿ ಬದಲಾಗುತ್ತದೆ.

ಹೇಳಿದಾಗ>ಅಳಿದಾಗ, ಹೇಳಿದ>ಅಳಿದ, ಹಸಿರು>ಅಸಿರು, ಹನ್ನೆರಡು>ಅನ್ನೇಡು, ಹೊರಟು>ವಂಟು, ಹೆಂಡತಿ>ಎಡ್ತಿ, ಹೋಗಿರೋದು>ಓಗಿರೋದು, ಹೇಳಿ>ಯೋಳಿ, ಹಕ್ಕಿ>ಅಕ್ಕಿ, ಹುಲಿ>ಉಲಿ, ಹೋಯಿತು>ವೋಯಿತು,

ಕೆಲವು ಶಬ್ದಗಳಲ್ಲಿ ಶ ಕಾರ ಸ ಕಾರವಾಗುತ್ತದೆ.

ಶಿವ>ಸಿವ, ಆಕಾಶ>ಆಕಾಸ, ವರ್ಷ>ವರ್ಸ, ದೇಶ>ದೇಸ

ಕೆಲವು ಶಬ್ದಗಳಲ್ಲಿ ಚ ಕಾರ ಸ ಕಾರವಾಗಿ ಪರಿವರ್ತನೆಹೊಂದಿದೆ.

ಚಂಬು>ಸಂಬು, ಯೋಚ್ನೆ>ಯೋಸ್ನೆ, ಚೆಲ್ಲಿ>ಸೆಲ್ಲಿ, ಚಲ್ಲಿ>ಸಲ್ಲಿ

ಕೆಲವು ಶಬ್ದಗಳಲ್ಲಿ ಅ, ಓ ಸ್ವರಗಳು ದೀರ್ಘಸ್ವರವನ್ನು ಪಡೆಯುತ್ತವೆ.

ಕೂದಲು>ಕೂದಾಲು, ಇರಲಿ>ಇರಾಲಿ, ಕರಡಿ>ಕರಾಡಿ, ಕುಡಿಯಲು>ಕುಡಿಯಾಲು, ಹತ್ತಿರ>ಅತ್ತೀರ, ತರೋದು>ತರಾದು, ಕೊಲ್ಲಲು>ಕೊಲ್ಲಾಲೆ, ಕೇಳಿತು>ಕಾಳೀತು, ನೇಣು>ನಾಣು, ಸುಡದೆ>ಸಡಾದೆ, ನೋಡಲು>ನೊಡಾಲೆ, ಕೇಲಿದರು >ಕಾಳಿದಾರೆ

ಕೆಲವು ಶಬ್ದಗಳಲ್ಲಿ ಇ ಕಾರ ಉ ಕಾರವಾಗಿ ಬದಲಾಗುತ್ತದೆ.

ಬಿಟ್ಟೆ>ಬುಟ್ಟು, ಕಟ್ಟಿ>ಕಟ್ಟು, ಬಿಡು>ಬುಡು

ಕೆಲವು ಶಬ್ದಗಳಲ್ಲಿ ಒತ್ತಕ್ಷರ ಲೋಪವಾಗುತ್ತದೆ.

ಆಯ್ತು>ಆತು, ಮರದಲ್ಲಿ>ಮರಾಲೆ, ಕೊಳದಲ್ಲಿ>ಕೊಳಾಲೆ, ಮರಕ್ಕೆ>ಮರಗು

ಜೇನು ಕುರುಬ ಕನ್ನಡದಲ್ಲಿ ಕಾಣ, ಕಾಣಿ ಎಂಬ ವಿಶೇಷ ಪ್ರಯೋಗವಿದೆ.

ಅಲ್ಲ ಕಾಣಿ, ಇಲ್ಲ ಕಾಣ ಇತ್ಯಾದಿ.

ಜೇನು ಕುರುಬ ಕನ್ನಡದಲ್ಲಿ ಪ್ರಥಮ ಪುರುಷ ಸರ್ವನಾಮದಲ್ಲಿ ಪುಲ್ಲಿಂಗ ಸರ್ವನಾಮಗಳಿವೆ. ಅಂವ, ಇವ, ಇಬಾ, ಇವಾನೆ. ಸ್ತ್ರೀಲಿಂಗ ಸರ್ವನಾಮಗಳು ಇವಳ, ಅವಳ, ಆಳ ಆಗಿದೆ. ಬಹುವಚನದಲ್ಲಿ ನಪುಂಸಕಲಿಂಗವೆ ಬಳಕೆಯಾಗುತ್ತದೆ. ಉದಾ: ನಮ್ಮ ಆದಿ ಅಯ್ಯ ಎಲ್ಲವನ್ನು ಹೇಳಿಕೊಡುತ್ತದೆ.' ಸಪ್ತಮಿ ವಿಭಕ್ತಿ ಪ್ರತ್ಯಯ ಅಲ್ಲಿ ಎಂಬುದಕ್ಕೆ ಬದಲಿಗೆ ಆಲೆ ಎಂಬ ಪ್ರತ್ಯಯ ಬರುತ್ತದೆ. 'ಇಬ ಬಂದು ಆಲು ಕೊಳದಾಲೆ ತಾನೆ ನೀರು ಮೀಯಾದು', ' ರಾಮ ಉಂಗುರಾನೆ ಮರಾಲೆ ಕುಳಿತು ಬಾಲಾಲೆ ಬುಟ್ಟನ'. ಚತುರ್ಥಿ ವಿಭಕ್ತಿ ಪ್ರತ್ಯಯಕ್ಕೆ ಬದಲಾಗಿ ಗು ಪ್ರತ್ಯಯವಿದೆ. 'ಆಲು ಮರ ಬೋಳು ನೆಲಾಗು ಬಿದ್ದರಾತು', 'ಅಂಗೆ ಕಟ್ಟಿ ಮರಾಗು ಕಟ್ಟಿ ನಾಣಾ ಕನೆ ಮರ ಬಿದ್ದು ಹೋತು',

ಕೆಲವು ಶಬ್ದಗಳ ಅಂತ್ಯವು ಒತ್ತಕ್ಷರವನ್ನು ಕಳೆದುಕೊಂಡು ವಿರಳವಾಗುತ್ತವೆ.

ಬಿಡೋದಿಲ್ಲ>ಬುಡಾದಿಲೆ, ಬರೋದಿಲ್ಲ>ಬರಾಲಿಲೆ, ಕೇಳಾದಿಲ್ಲೆ>ಕೇಳಾಲಿಲೆ, ಮಾಡಲ್ಲ>ಮಾಡಾಲೆ

## ಇಲ್ಲಿಗರ ಕನ್ನಡ

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಸಾವನ ದುರ್ಗ, ರಾಮಗಿರಿ, ಶಿವನಗಿರಿ, ಮುದುವಾಡಿದುರ್ಗ, ಕಬ್ಬಾಳು ದುರ್ಗ. ರೇವಣ್ಣ ಸಿದ್ದೇಶ್ವರದ ಬೆಟ್ಟಗುಡ್ಡ ಪ್ರದೇಶಗಳು ತುಮಕೂರು ಜಿಲ್ಲೆಯ ಗಡಿಯಲ್ಲಿರುವ ಹುಲಿಯೂರುದುರ್ಗ, ಮಾಗಡಿ, ರಾಮನಗರ ತಾಲ್ಲೋಕಿನ ಕೆಲವು ಪ್ರದೇಶಗಳಲ್ಲಿ ಇಲ್ಲಿಗರು ವಾಸಿಸುತ್ತಾರೆ.
ಇಲ್ಲಿಗರು ಇರುಳಿಗರು ಬೇರೆ ಬೇರೆ ಬುಡಕಟ್ಟುಗಳಲ್ಲ. ಇಲ್ಲಿಗ ಎಂಬುದರ ವಿರೂಪವೇ ಇರುಳಿಗ ಎಂದು ಹೆಚ್, ಪಿ ನಂಜುಂಡಯ್ಯನವರು ಅಭಿಪ್ರಾಯಪಡುತ್ತಾರೆ. ಥರ್‌ಸ್ಟನ್ ಎಡ್ಗರ್, ಹೆಚ್,ಪಿ ನಂಜುಂಡಯ್ಯನವರು ಮತ್ತು ಕುರುಬ ಬಸವರಾಜುರವರು ಇರುಳಿಗರು ಇಲ್ಲಿಗರು ಒಂದೇ ಬುಡಕಟ್ಟಿಗೆ ಸೇರಿದವರು ಎನ್ನುತ್ತಾರೆ. ಸಿದ್ಧಗಂಗಯ್ಯ ಕಂಬಾಳು ಅವರು ಇರುಳರನ್ನು ಇಲ್ಲಿಗರು ಎಂದೇ ಕರೆದಿದ್ದಾರೆ. (ಕರ್ನಾಟಕ ಬುಡಕಟ್ಟುಗಳು, ಸಿದ್ಧಗಂಗಯ್ಯ ಕಂಬಾಳು, ಪು-568) ಈ ಇಲ್ಲಿಗರು ಮಾತನಾಡುವ ಕನ್ನಡವೆ ಇಲ್ಲಿಗ ಕನ್ನಡ. ಈ ಉಪಭಾಷೆಯ ಮೇಲೆ ತಮಿಳಿನ ಪ್ರಭಾವವಿದೆ.

ಇಲ್ಲಿಗರು ಹಿಂದೆ ಗುಹೆಗಳಲ್ಲಿ ವಾಸಿಸುತ್ತಿದ್ದರು. ಇಂದು ಗುಡಿಸಲುಗಳಲ್ಲಿ ವಾಸಿಸುತ್ತಾರೆ. ಕೂಲಿ ಇವರ ಮುಖ್ಯ ಕಸುಬು. ಜೇನು ಇಳಿಸುವುದು, ಮಾರುವುದನ್ನು ಕೂಡ ಮಾಡುತ್ತಾರೆ. ಇತ್ತೀಚೆಗೆ ಕೃಷಿಯಲ್ಲಿ ತೊಡಗಿಕೊಂಡಿದ್ದು ರಾಗಿ, ಜೋಳ, ಅವರೆ, ತೊಗರಿ, ಹುಚ್ಚಳ್ಳನ್ನು ಬೆಳೆಯುತ್ತಾರೆ. ಜೊತೆಗೆ ಕುರಿ, ಕೋಳಿ, ಮೇಕೆಗಳನ್ನು ಸಾಕುತ್ತಾರೆ. ಇಲ್ಲಿಗರು ವಾಸಿಸುವ ಗುಡಿಸಲನ್ನು ಬೂಡು ಎಂದು ಕರೆಯುತ್ತಾರೆ. ಹಬ್ಬ, ಹುಟ್ಟು, ಸಾವು, ಇಲ್ಲಿಗರು ಮದುವೆ, ಆಚಾರ- ವಿಚಾರಗಳಲ್ಲಿ ತಮ್ಮದೇಯಾದ ವಿಶಿಷ್ಟತೆಯನ್ನು ಹೊಂದಿದ್ದಾರೆ. ಕಣಿ ಹೇಳುವುದು ಈ ಬುಡಕಟ್ಟಿನ ಸಾಂಸ್ಕೃತಿಕ ವೈಶಿಷ್ಟವಾಗಿದೆ. ಇದನ್ನು 'ದೇವರನ್ನು ಕರೆಯುವುದು' ಎನ್ನತ್ತಾರೆ. ತಮ್ಮ ಬದುಕಿನ ಕಷ್ಟ ಸುಖಗಳಿಗೆ ಕಣಿ ಕೇಳುವ ಮೂಲಕ ಪರಿಹಾರ ಕಂಡುಕೊಳ್ಳುತ್ತಾರೆ. ಇಲ್ಲಿಗರು ವ್ಯವಹಾರಕ್ಕೆ ಬಳಸುವ ಮಾತು ಕನ್ನಡ. ಅಲಲ್ಲಿ ತಮಿಳು ಪದಗಳು ಕಂಡುಬರುತ್ತದೆ. ಇವರ ಭಾಷೆಯು ಕನ್ನಡಕ್ಕೆ ನಿಕಟವಾಗಿರುವುದರಿಂದ ಕನ್ನಡದ ಉಪಭಾಷೆಯೆಂದು ಕರೆಯಲು ಅಡ್ಡಿಯಿಲ್ಲ. (ಅದೇ, ಪು-573) ತಮಿಳಿನ ಗಡಿಭಾಗದ ಪ್ರದೇಶಗಳು ಇವರ ನೆಲೆಗಳಾದ್ದರಿಂದ ಆ ಭಾಷೆಯ ಪ್ರಭಾವವೂ ಇಲ್ಲಿಗರ ಕನ್ನಡದ ಮೇಲೆ ಆಗಿದೆ. ತಮಿಳುನಾಡಿನಲ್ಲಿ ನೆಲೆಸಿರುವ ಇರುಳಿಗ ಬುಡಕಟ್ಟು ಬೇರೆ ಜನ ಸಮುದಾಯವಾಗಿದೆ. ಇವರು ಕನ್ನಡದ ಇಲ್ಲಿಗರಂತೆ ಇಲಿ ಹಿಡಿಯುವುದಿಲ್ಲ. ಆದರೂ ತಮಿಳುನಾಡು ಮತ್ತು

ಕರ್ನಾಟಕದಲ್ಲಿ ನೆಲೆಸಿರುವ ಇಲ್ಲಿಗರು ಒಂದೇ ಬುಡಕಟ್ಟಿನ ಮೂಲಕ್ಕೆ ಸೇರಿದವರು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಇಲ್ಲಿಗರ ಉಪಭಾಷೆಯಲ್ಲಿ ಕೆಲವು ಶಬ್ದಗಳ ವಿಶೇಷವಾಗಿವೆ.

| ಇಲ್ಲಿಗ ಕನ್ನಡ | ಪ್ರಮಾಣ ಕನ್ನಡ |
|---|---|
| ಮೂಕು | ಮೂಗು |
| ಕಣ್ಣಾರ್ರ | ಕಣ್ಣು |
| ಕಯ್ಯಿ | ಕೈ |
| ಬಾಯಾದ್ರ | ಬಾಯಿ |
| ಮೀಪಾ | ಮೀಸೆ |
| ಸಲ್ಲಾದ್ರ | ಹಲ್ಲು |
| ಕಣಕಾಲು | ಮೊಣಕಾಲು |

ಇಲ್ಲಿಗರ ಕನ್ನಡದಲ್ಲಿ ಸಂಬಂಧ ಸೂಚಕ ಶಬ್ದಗಳು ವಿಶೇಷವಾಗಿವೆ

ಅಣ್ಣ>ಅಣ್ಣೋ, ಅಕ್ಕ>ಅಕ್ಕೋ, ಅಳಿಯ>ಅಳಿಯೋರ, ತಂಗಿ>ಪದ್ನಂದೊಳು, ಪದ್ನಂದಪ್ಪ>ಮೊಮ್ಮಗ, ಮಾವ>ಮಾವೋ

ಇಲ್ಲಿಗ ಕನ್ನಡದ ಮೇಲೆ ತಮಿಳು ಪ್ರಭಾವವನ್ನು ಕಾಣಬಹುದು.

| ಇಲ್ಲಿಗ ಕನ್ನಡ | ಪ್ರಮಾಣ ಕನ್ನಡ | ತಮಿಳು |
|---|---|---|
| ಪುಳಿಯೊಕಾಯಿ | ಹುಣಸೆಕಾಯಿ | ಪುಳಿಂಗಾಯ್ |
| ಮೊಳಗು | ಮೆಣಸು | ಮಿಳಗು |
| ತ್ಯಾಂಕಾಯಿ | ತೆಂಗಿನಕಾಯಿ | ತೆಂಗಾಯ್ |
| ಪಿಳ್ಳೆ | ಮಗು | ಕುಳ್ಳಂದೈ |
| ಬೆಟ್ಟೊ | ಬೆಟ್ಟ | ಮಲೈ |
| ತಲೆ | ತಲೆ | ತಲೈ |
| ತೇನು | ಜೇನು | ತೇನ್ |

ಕೆಲವು ಶಬ್ದಗಳಲ್ಲಿ ಡ ಕಾರ ರ ಕಾರವಾಗುತ್ತದೆ.

ಬಾರೋ>ಬಾಡ, ಕೊಡು>ಕೊಡುರಾ, ಬಿಡು>ಬಿಡುರಾ

ಇಲ್ಲಿಗ ಕನ್ನಡದ ಸರ್ವನಾಮಗಳು ಹೀಗಿವೆ. ಅವೋ.[ಅವನು], ಅಮ್ನ [ಅವಳು], ನಾನು, ನೀನು. ಈ ಉಪಭಾಷೆಯಲ್ಲಿ ಏಕವಚನಕ್ಕೆ ಪ್ರತ್ಯೇಕ ಪ್ರತ್ಯಯವಿಲ್ಲ. ಬಹುವಚನದಲ್ಲಿ ಗೂಳ, ದೀರು ಪ್ರತ್ಯಯಗಳಿವೆ. ಬಳೆಗೂಳು, ಹೆಂಗ್ಸರುಗುಳೂ, ಗಂಡಂದೀರು, ಗಂಡ್ರ, ಮರಿಗೂಳು, ಅತ್ಗೆದೀರು. ಇತ್ಯಾದಿ.

ಕೆಲವು ಶಬ್ದಗಳ ಒತ್ತಕ್ಷರಗಳು ವಿರಳವಾಗುತ್ತದೆ.

ಶಾಸ್ತ್ರ>ಸಾಸುರ, ಸಂಕ್ರಾಂತಿ>ಸಂಕುರಾತಿ, ನಿದ್ದೆ>ನಿದಿರೆ,

ಕೆಲವು ಶಬ್ದಗಳ ಏ ಕಾರವು ಅಳಿದು ಆ ಕಾರವಾಗಿ ಬರುತ್ತದೆ. ಮತ್ತು ಒತ್ತಕ್ಷರವನ್ನು ಪಡೆಯುತ್ತದೆ.

ಮೇಲೆ>ಮ್ಯಾಲೆ, ಬೇರೆ>ಬ್ಯಾರೆ, ನನಿಗೇಕೆ>ನನಿಗ್ಯಾಕೆ

ಇಲ್ಲಿಗ ಕನ್ನಡದಲ್ಲಿ ಕೆಲವು ವಿಶೇಷ ವಾಕ್ಯಗಳಿವೆ.

ಊಟವಾಯಿತ>ಕಳಿತಿಂಡಿಸಾರ

ದನ ಹಿಡ್ಕಂಡು ಬಾ>ಮಾಡು ಪುಸ್ಕೊಂಡು ಬಾರ

ಮಲಕೊಳ್ಳಾನ ಬಾ>ಬುಡ್ಕೋವು ಬಾರ

ಬೆಂಕಿ ಹಚ್ಚು>ನೆರ್‍ದ್ದೊಡುಂಗ್ರ

ಸ್ನಾನ ಮಾಡು>ತಣ್ಣಿ ಮುಟ್ಟುಂಗುರ

ಕಲ್ಲಿಸೇವೆ ಮಾಡಬೇಕು> ಕಲ್ಲಿ ಸ್ಯಾವೆ ಸ್ನೇಕ್ಕು

## ಸೋಲಿಗ ಕನ್ನಡ

ಮೈಸೂರು ಜಿಲ್ಲೆಯ ಕೊಳ್ಳೆಗಾಲ, ಚಾಮರಾಜನಗರ, ಬಿಳಿಗಿರಿ ರಂಗನ ಬೆಟ್ಟ, ಮಹದೇಶ್ವರನ ಬೆಟ್ಟ, ಎಳಂದೂರು, ಹೆಗ್ಗಡದೇವನಕೋಟೆ, ಹುಣಸೂರು, ತಾಲ್ಲೋಕುಗಳಲ್ಲಿ ಸೋಲಿಗರು ನೆಲೆಸಿದ್ದಾರೆ. ವಿರಳವಾಗಿ ಬೆಂಗಳೂರು, ಮಂಡ್ಯ, ತುಮಕೂರು, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಚಿತ್ರದುರ್ಗ, ಕೋಲಾರಗಳಲ್ಲಿ ನೆಲೆಸಿದ್ದಾರೆ. ಸೋಲಿಗರಲ್ಲಿ ಕುಲ ಜೀವನ ಬಹುಮುಖ್ಯ ಪಾತ್ರವಹಿಸುತ್ತದೆ. ಸೋಲಿಗರಲ್ಲಿಯೇ ಊರು ಸೋಲಿಗ, ಕಾಡು ಸೋಲಿಗ, ಬಲ್ಲರ ಸೋಲಿಗ, ಮಲೆ ಸೋಲಿಗ, ಊರಿಬತ್ತಿ ಸೋಲಿಗ, ಬುರುಡೆ ಸೋಲಿಗ, ಮೊದಲಾದ ಒಳಪಂಗಡಗಳಿವೆ. (ಕರ್ನಾಟಕ ಬುಡಕಟ್ಟುಗಳು, ಚಂದ್ರು ಕಾಳೇನಹಳ್ಳಿ, ಪು–322)

ವ್ಯವಸಾಯ ಸೋಲಿಗರ ಮುಖ್ಯ ಕಸುಬು. ಜೊತೆಗೆ ಜೇನು ಕೀಳುವುದು, ಗೆಡ್ಡೆ ಗೆಣಸು ಕೀಳುವುದು, ಮೊದಲಾದ ಕೆಲಸವನ್ನು ಮಡುತ್ತಾರೆ. ಸೋಲಿಗರು ವಾಸಿಸುವ ಸ್ಥಳಕ್ಕೆ ಪೋಡು ಎನ್ನುತ್ತಾರೆ. ಒಂದು ವಿಶೇಷ ಪರಿಸರದಲ್ಲಿ ಬಾಳುತ್ತಿರುವ ಸೋಲಿಗರ ಭಾಷಿಕ ಪರಿಸರವೂ ವಿಶೇಷವಾಗಿದೆ. ಸೋಲಿಗ ಕನ್ನಡದ ಮೇಲೆ ತಮಿಳಿನ ಪ್ರಭಾವವಿದೆ. ತಮಿಳುನಾಡು ಗಡಿಭಾಗಕ್ಕೆ ಇವರ ನೆಲೆಗಳು ಹೊದಿಕೊಡಿರುವುದು ಇದಕ್ಕೆ ಕಾರಣವಾಗಿದೆ. ಸೋಲಿಗರ ಕನ್ನಡದಲ್ಲಿ ಅನುನಾಸಿಕತೆ ಪ್ರಧಾನವಾಗಿದೆ.

ಅವನ>ಅವ ಇವನ>ಇವ ಅವಳು>ಅವಿ

ಸೋಲಿಗ ಕನ್ನಡದಲ್ಲಿ ಬಹುವಚನ ಪ್ರತ್ಯಗಳು ವಿಶಿಷ್ಟವಾಗಿವೆ.

ಮಕ್ಕಳು>ಮಕ್ಕ ಮರಗಳು>ಮರಗ

ಆನೆಗಳು>ಆನೆಗ ಎತ್ತುಗಳು>ಎತ್ತುಗ

ಕೆಲವು ಶಬ್ದಗಳ ದ್ವೀತಿಯಾಕ್ಷರದಲ್ಲಿ ಎ ಕಾರ ಇ ಕಾರವಾಗುತ್ತದೆ.

ಕೆರೆ>ಕೆರಿ, ಮರೆ>ಮರಿ ತೆರೆ>ತೆರಿ

ಚತುರ್ಥಿವಿಭಕ್ತಿ ಪ್ರತ್ಯಯ ಕ್ಕೆ, ಗೆ ಬದಲಾಗಿ ಕ, ಗ ಬಳಕೆಯಲ್ಲಿದೆ.

ಕಾಡಿಗೆ>ಕಾಡಿಗ, ಊರಿಗೆ>ಊರಿಗ, ಗಿಡಕ್ಕೆ>ಗಿಡಕ್ಕ, ಮರಕ್ಕೆ>ಮರಕ್ಕ

ಭೂತಕಾಲ ಸೂಚಕ ಪ್ರತ್ಯಯಗಳು ಸೋಲಿಗ ಕನ್ನಡದಲ್ಲಿ ವಿಶೇಷವಾಗಿವೆ.

ಹೋದೆ>ಹೋನೆ, ಹೋದೆವು<ಹೋನೋ, ಬಂದೆ>ಬನ್ನೆ

ಸೋಲಿಗ ಕನ್ನಡದಲ್ಲಿ ಶಕಟ ರೇಫೆ ಮತ್ತು ರೇಫೆಗಳು ಹಳಗನ್ನಡದಂತೆ ಇವೆ.

ಮುರಿ>ಮುೞು, ಅರಿ>ಅೞಿ, ಕೋಳಿ>ಕೋೞಿ , ಮಳೆ>ಮೞೆ, ಉಳು>ಉೞು

ಅಧ್ಯಾಯ 7

# ಐತಿಹಾಸಿಕ ಉಪಭಾಷೆಗಳು

ಆಧುನಿಕ ಕನ್ನಡದ ಉಪಭಾಷೆಗಳು, ಸಾಮಾಜಿಕ ಉಪಭಾಷೆಗಳು ಎಂದು ವರ್ಗೀಕರಿಸಿ ಕೊಂಡಿರುವಂತೆಯೇ ಕನ್ನಡ ಭಾಷೆ ಕಾಲದಿಂದ ಕಾಲಕ್ಕೆ ಆದ ಅವಸ್ಥೆಗಳನ್ನು ಆಧರಿಸಿ ಐತಿಹಾಸಿಕ ಉಪಭಾಷೆಗಳಾಗಿ ವರ್ಗೀಕರಿಸಿಕೊಳ್ಳಬಹುದು. ಕನ್ನಡ ಭಾಷೆಯ ಅವಸ್ಥಾ ಭೇದಗಳೆ ಐತಿಹಾಸಿಕ ಉಪಭಾಷೆಗಳಾಗಿವೆ. "ಒಂದು ಕಾಲದಿಂದ ಇನ್ನೊಂದು ಕಾಲಕ್ಕೆ ಪದದ ಸ್ವರೂಪದಲ್ಲಿ ಉಂಟಾಗುವ ವ್ಯತ್ಯಾಸಗಳನ್ನು ಪರಿಶೀಲಿಸುವುದು ಕಾಲಕ್ರಮಿತ ಅಥವಾ ಐತಿಹಾಸಿಕ ಉಪಭಾಷೆಗಳೆನಿಸುತ್ತದೆ."(ರಾಜೇಂದ್ರ ಎಂ ನಾಯಕ, ಪು–24) ಕನ್ನಡ ಭಾಷೆಯು ಪಡೆದ ಅವಸ್ಥೆಗಳು ಶಾಸನ ಮತ್ತು ಕಾವ್ಯಗಳಿಂದ ಗುರುತಿಸಿಕೊಳ್ಳಬಹುದಾಗಿದೆ. ಹಳಗನ್ನಡದಲ್ಲಿ ಜೈನ ಸಾಹಿತ್ಯ ಮುಂಚೂಣಿಯಲ್ಲಿದ್ದರೆ, ಹನ್ನೆರಡನೇ ಶತಮಾನದ ಹೊತ್ತಿಗೆ ವೀರಶೈವಸಾಹಿತ್ಯ ಮುಂಚೂಣಿಯಲ್ಲಿತ್ತು. ಈ ಎರಡು ಸಾಹಿತ್ಯಗಳಲ್ಲಿ ಕನ್ನಡ ಭಾಷೆಯ ಬದಲಾವಣೆ ಇದೆ. ಐತಿಹಾಸಿಕ ಉಪಭಾಷೆಗಳ ಅಧ್ಯಯನವು "ಕಾಲದಿಂದ ಕಾಲಕ್ಕೆ ಕನ್ನಡ ಭಾಷೆ ಯಾವ ರೀತಿಯಲ್ಲೆಲ್ಲಾ ಬದಲಾಗುತ್ತಾ ಬಂದಿದೆ ಎಂಬುದನ್ನು ತಿಳಿಯುವುದರ ಮೂಲಕ ಅದು ಕಳೆದ ಒಂದೂವರೆ ಸಾವಿರ ವರ್ಷಗಳಲ್ಲಿ ಹೇಗೆ ಬೇರೆ ಬೇರೆ ಕವಲುಗಳಾಗಿ ಒಡೆದಿದೆ ಎಂಬುದನ್ನು ನಿರ್ಧರಿಸಲು ಸಾಧ್ಯವಿದೆ."(ಎಇ.ಎನ್ ಶಂಕರ ಭಟ್ಟ, ಪು–109) ಐತಿಹಾಸಿಕ ಉಪಭಾಷೆಗಳ ಮೂಲಕ ಕನ್ನಡದ ಚರಿತ್ರೆಯನ್ನು ಕಟ್ಟಲು ಸಾಧ್ಯವಿದೆ. ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಹೀಗೆ ಕನ್ನಡ ಭಾಷೆ ವಿಕಾಸವಾಗಿರುವುದನ್ನು ಕಾಣುತ್ತೇವೆ. ಹಳಗನ್ನಡ ಕಾಲಕ್ಕಾಗಲೇ ಪ ಕಾರವು ಹ ಕಾರವಾಗಿ ಬದಲಾಗುತ್ತಿತ್ತು. ಇದರ ಪರಿಣಾಮವಾಗಿ ಹೊಸಗನ್ನಡದಲ್ಲಿ ಪ ಕಾರ ಅಳಿದು ಹ ಕಾರವೇ ಉಳಿದು ಕೊಂಡಿತು. ಪಾವು>ಹಾವು, ಪಾಲು>ಹಾಲು, ಪೆಣ್ಣು>ಹೆಣ್ಣು. ಹೊಸಗನ್ನಡದಲ್ಲಿ ಹ ಕಾರವು ಬಿದ್ದು ಹೋಗಿ ಅ ಸ್ವರ ಮಾತ್ರ ಉಳಿದುಕೊಂಡಿದೆ. ಹಾಲು>ಆಲು, ಹಾವು>ಆವು, ಹಳಗನ್ನಡದಲ್ಲಿದ್ದ ರಳ ಕುಳ ಗಳು ಸೋಲಿಗ, ಬಡಗ ಕೆಲವು ಜನಸಮುದಾಯವನ್ನು ಹೊರತುಪಡಿಸಿದರೆ ಹೊಸಗನ್ನಡದಲ್ಲಿ ಬಹುತೇಕ ನಶಿಸಿಹೋಗಿದೆ.

ಐತಿಹಾಸಿಕ ಉಪಭಾಷೆಗಳ ಸ್ವರೂಪವನ್ನು ತಿಳಿಯಲು ಇರುವ ಆಧಾರಗಳೆಂದರೆ ಶಾಸನಗಳು ಮತ್ತು ಸಾಹಿತ್ಯ ಕೃತಿಗಳು. ಹೊಸಗನ್ನಡದಲ್ಲಿ ಪ್ರಾದೇಶಿಕ, ಸಾಮಾಜಿಕ ಉಪಭಾಷೆಗಳ ಪ್ರಾಯೋಗಿಕ ಅಧ್ಯಯನ ಸಾಧ್ಯವಾಗುವಂತೆ ಐತಿಹಾಸಿಕ ಉಪಭಾಷೆಗಳಲ್ಲಿ

ಸಾಧ್ಯವಿಲ್ಲ. ಆದರೂ ಈ ಉಪಭಾಷೆಗಳ ಭಾಷಾ ವ್ಯತ್ಯಾಸವನ್ನು ಅರಿಯುವ ಮೂಲಕ ಕನ್ನಡ ಭಾಷೆಯ ಕಾಲಿಕ ಪರಿವರ್ತನೆಯನ್ನು ತಿಳಿಯಬಹುದಾಗಿದೆ.

## ಪೂರ್ವದ ಹಳಗನ್ನಡ ಮತ್ತು ಹಳಗನ್ನಡ

ಪೂರ್ವದ ಹಳಗನ್ನಡದ ಕಾಲವನ್ನು ವಿದ್ವಾಂಸರು ಐದನೆಯ ಶತಮಾನದಿಂದ ಎಂಟನೆ ಶತಮಾದವರೆಗೆ ಎಂದು ಗುರುತಿಸುತ್ತಾರೆ. ಪೂರ್ವದ ಹಳಗನ್ನಡದ ಸ್ವರೂಪ ಅರಿಯಲು ಶಾಸನಗಳೇ ಮುಖ್ಯ ಆಧಾರಗಳು. ಪೂರ್ವದ ಹಳಗನ್ನಡ ಸಾಹಿತ್ಯ ಕೃತಿಯಾಗುವಷ್ಟರ ಮಟ್ಟಿಗೆ ಪ್ರೌಢವಾಗಿತ್ತೇ ಇಲ್ಲವೇ ಎಂಬುದನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಇದಕ್ಕೆ ದೊರೆತ್ತಿಲ್ಲದ ಸಾಹಿತ್ಯ ಕೃತಿಗಳ ಅಭಾವವೂ ಕಾರಣವಾಗಿದೆ.

ವಿದ್ವಾಂಸರು ಹಳಗನ್ನಡದ ಕಾಲವನ್ನು ಒಂಬತ್ತನೇ ಶತಮಾನದಿಂದ ಹನ್ನೆರಡನೇ ಶತಮಾನ ಎಂದಿದ್ದಾರೆ. ಕವಿರಾಜಮಾರ್ಗ ಹಳಗನ್ನಡದ ಮೊದಲ ಉಪಲಬ್ದ ಕೃತಿ. ಕನ್ನಡ ಒಂಬತ್ತನೆಯ ಶತಮಾನದ ಹೊತ್ತಿಗೆ ಪ್ರೌಢಭಾಷೆಯಾಗಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಹಲ್ಮಿಡಿ ಶಾಸನ, ಕವಿರಾಜಮಾರ್ಗ, ಪಂಪ, ರನ್ನ, ಪೊನ್ನ, ನಾಗವರ್ಮ, ವಡ್ಡಾರಾಧನಕಾರರ ಕೃತಿಗಳು ಹಳಗನ್ನಡದ ಸ್ವರೂಪವನ್ನು ತಿಳಿಯಲು ಸಹಾಯಮಾಡುತ್ತವೆ. ಪೂರ್ವದ ಹಳಗನ್ನಡದಲ್ಲಿ ಕಂಡು ಬರುವ ಆಖ್ಯಾತ ಪ್ರತ್ಯಯಗಳು ಸ್ವರ ದೀರ್ಘವಾಗಿದ್ದರೆ ಹಳಗನ್ನಡದಲ್ಲಿ ಹ್ರಸ್ವ ಸ್ವರವಾಗಿರುತ್ತದೆ.

ಸಂದಾನ್>ಸಂದನ್ ಪಡೆದಾನ್>ಪಡೆದನ್

ಕೊಂದೊನ್>ಕೊಂದನ್ ವಂದಾನ್.ವಂದನ್

ಪೂ.ಹ ದಲ್ಲಿ ದ್ವಿತಿಯಾ ವಿಭಕ್ತಿ ಪ್ರತ್ಯಯದ ಸ್ವರ ದೀರ್ಘವಾಗಿದ್ದರೆ ಹ.ಗ ದಲ್ಲಿ ಹ್ರಸ್ವವಾಗಿವೆ.

ಅದಾನ್>ಆದನ್, ದೇಗುಲಮಾನ್ >ದೇಗುಲಮನ್

ಇದಾನ್>ಇದ್ ಕೋಟೆಯಾನ್>ಕೋಟೆಯನ್

ಪೂ.ಗ ದಲ್ಲಿ ಷಷ್ಠೀ ವಿಭಕ್ತಿ ಪ್ರತ್ಯಯ ದೀರ್ಘವಾಗಿದ್ದರೆ ಹ.ಗ ದಲ್ಲಿ ಹ್ರಸ್ವವಾಗಿವೆ

ನರಕದಾ>ನರಕದ ನವಿಲೂರಾ>ನವಿಲುರ

ಪಶುಪತಿಯಾ>ಪಶುಪತಿಯ ಮಂಗಳೀಸನಾ>ಮಂಗಳಿಸನ

ಪೂ.ಹ ದ ಸಪ್ತಮಿ ವಿಭಕ್ತಿ ಪ್ರತ್ಯಯ ಉಳ್ ಹ.ಗ ದಲ್ಲಿ ಒಳ್ ಆಗಿದೆ.

ನಾಡುಳ್>ನಾಡೊಳ್ ಸಂಕಟದುಳ್>ಸಂಕಟದೊಳ್

ಭುವಿಯುಳ್>ಭುವಿಯೊಳ್ ವಟ್ಟದುಳ್>ವೆಟ್ಟದೊಳ್

ನಿಷೇದಾರ್ಥಕ ಕ್ರಿಯಾಪದ ಪೂ.ಹ ದಲ್ಲಿ ದೀರ್ಘವಾಗಿದ್ದರೆ ಹ.ಗ ದಲ್ಲಿ ಹ್ರಸ್ವವಾಗಿದೆ.

ತಪ್ಪಾದೆ>ತಪ್ಪದೆ ಇಲ್ಲಾದೆ>ಇಲ್ಲದೆ

ಪೂ.ಗ ದಲ್ಲಿ ಪದದ ಆದಿಯ ವ ಕಾರ ಹ.ಗದಲ್ಲಿ ಬ ಕಾರವಾಗುತ್ತದೆ.

ವಿಟ್ಟಾರ್>ಬಿಟ್ಟಾರ್ ವಿತ್ತಿದಲ್ಲಿ>ಬಿತ್ತಿದಲ್ಲಿ

ವಟ್ಟದೊಳ್>ಬೆಟ್ಟದೊಳ್ ವಿಟ್ಟದು>ಬಿಟ್ಟದು

ಪೂ.ಗ ದಲ್ಲಿ ಪ ಕಾರ ಹ.ಗ ದಲ್ಲಿ ಹ ಕಾರವಾಗಿದೆ.

ಪಲ್ಲು>ಹಲ್ಲು ಪಂದಿ>ಹಂದಿ

ಪಾಳು>ಹಾಳು ಪಾಲು>ಹಾಲು

ಪೂಗ.ದಲ್ಲಿ ದ್ವಿತ್ವವಿರುವ ಕಡೆ ಹ.ಗ ದಲ್ಲಿ ಏಕವ್ಯಂಜನವಿದೆ.

ತಳೆಕ್ಕಾಡು>ತಳೆಕಾಡು ಸ್ವರ್ಗ್ಗ>ಸ್ವರ್ಗ

ಪಾರ್ವ್ವರಂ>ಪಾರ್ವರು ಧರ್ಮ್ಮ>ಧರ್ಮ

ಪೂ ಗ.ದಲ್ಲಿ ಬಿಂದುವಿನ ಸ್ಥಾನದಲ್ಲಿ ನ ಕಾರ ಬರುತ್ತದೆ. ಹ. ಗ ದಲ್ಲಿ ಬಿಂದು ಬರುತ್ತದೆ.

ಅವನ್ಗೆ>ಅಂವಗೆ ನೋನ್ಪಿ>ನೋಂಪಿ

ಸುತನ್ಗೆ>ಸುತಂಗೆ ಒನ್ದು>ಒಂದು

ಪೂರ್ವದ ಹಳಗನ್ನಡದಲ್ಲಿ ಮೂಲದ್ರಾವಿಡ ಛಾಯೆ ಇದೆ.

ನರಕ>ನರಗ, ವೈಕುಂಠ>ವೈಕೊನ್ತ, ನಾಯಕನ್>ನಾಯಿಗನ್

ಪೂ.ಗ ದಲ್ಲಿ ಕೆಲವು ಕ್ರಿಯಾಧಾತುಗಳ ಆದಿಯ ಎ, ಒ ಕಾರ ಗಳು ಹ.ಗ ದಲ್ಲಿ ಇ,ಉ ಸ್ವರಗಳಾಗುತ್ತವೆ.

ಕೆಡು>ಕಿಡು, ತೊಡು>ತುಡು, ಕೆಸು>ಕಿಸು, ಕೊಡು>ಕುಡು

ಹಳಗನ್ನಡದಲ್ಲಿ ಉ ಕಾರದ ಮುಂದೆ ರ ಕಾರ ಬರುತ್ತದೆ

ಕಳ್ತೆ>ಕರ್ತೆ ಗಳ್ದೆ>ಗರ್ದೆ

ಹಳಗನ್ನಡದಲ್ಲಿ ಸ್ವರದ ನಡುವಿನ ಮ ಕಾರ ಬಿದ್ದುಹೋಗುತ್ತದೆ.

ನೀಮ್>ನೀವು ನಮ್>ನಾವು

ಹಳಗನ್ನಡದಲ್ಲಿ ಒಂದು ಸರ್ವನಾಮ ಮತ್ತು ನಾಮಪದ ಸೇರಿ ಕ್ರಿಯಾಪದವಿಲ್ಲದೆ ವಾಕ್ಯವಾಗುತ್ತದೆ.

ಇದು ಕೈಲಸಂ ಇದು ಬನಮ್

ಇದು ಚಕ್ರವ್ಯೂಹಂ ಆವನಂ ಕಲಿ

## ನಡುಗನ್ನಡ

ನಡುಗನ್ನಡದ ಕಾಲವನ್ನು ವಿದ್ವಾಂಸರು ಹನ್ನೆರಡನೇ ಶತಮಾನದಿಂದ ಹದಿನೇಳನೆ ಶತಮಾನದವರೆಗೆ ಗುರುತಿಸುತ್ತಾರೆ. ಹಳಗನ್ನಡದ ಕಾಲದಲ್ಲಿ ಪ್ರೌಢಾವಸ್ಥೆಯನ್ನು ಪಡೆದ ಕನ್ನಡ ಪಂಡಿತಮಾನ್ಯ ಭಾಷೆಯಾಗಿತ್ತು. ಸಂಸ್ಕೃತದ ಪ್ರಭಾವ ಹೆಚ್ಚಾಗಿತ್ತು. ಸಾಹಿತ್ಯ, ಶಾಸನದ ಭಾಷೆಗಳು ಹಳಗನ್ನಡದಲ್ಲಿ ಜನಸಾಮಾನ್ಯರ ಆಡುನುಡಿಯನ್ನು ಹೊರಗಿಟ್ಟಿತ್ತು. ನಡುಗನ್ನಡದ ಕಾಲದಲ್ಲಿ ಜನಸಾಮಾನ್ಯರ ಭಾಷೆಗೆ ಪ್ರಾಮುಖ್ಯತೆ ಸಿಕ್ಕಿತು. ಸಂಸ್ಕೃತ ಪ್ರಭಾವದಿಂದ ಕನ್ನಡವನ್ನು ರಕ್ಷಿಸುವ ಕೆಲಸಗಳು ನಡೆದವು. ಸಮಾಜದ ತಳಸಮುದಾಯದ ಜನರೂ ಸಾಹಿತ್ಯ ರಚನೆಯಲ್ಲಿತೊಡಗಿಕೊಡದ್ದು ನಡುಗನ್ನಡ ವಿಭಿನ್ನ ಕವಲುಗಳಲ್ಲಿ ವಿಕಾಸ ಹೊಂದಲು ಕಾರಣವಾಯಿತು. ಹಳಗನ್ನಡದ ಕ್ಲಿಷ್ಟ ರೂಪಗಳು ಅಳಿದು ನಡುಗನ್ನಡ ಸರಳರೂಪವನ್ನು ಪಡೆಯಿತು. ಹಳಗನ್ನಡದಲ್ಲಿ ಉಂಟಾದ ಬದಲಾವಣೆಗಳು ನಡುಗನ್ನಡದಲ್ಲಿ ದೃಢವಾದವು. ದೀರ್ಘ ಸಮಾಸ ಪದಗಳು ನಡುಗನ್ನಡದಲ್ಲಿ ಕಡಿಮೆಯಾಗತೊಡಗಿದವು. ಸಂಸ್ಕೃತ ಶಬ್ದಗಳಿಗೆ ಬದಲಾಗಿ ಅಪಭ್ರಂಶ ರೂಪಗಳು ನಡುಗನ್ನಡದಲ್ಲಿ ಹೆಚ್ಚು ಬಳಕೆಯಾಗತೊಡಗಿದವು.

ಸ್ಮಶಾನ>ಮಸಣ ಆಕಾಸ>ಆಗಸ

ಭಕ್ತಿ>ಭಕುತಿ ಪಾರ್ವ>ಹಾರುವ

ಅನುನಾಸಿಕ ಮತ್ತು ಯ, ರ, ಲ, ಳ ಧ್ವನಿಗಳಿಂದ ಅಂತ್ಯವಾಗಿದ್ದ ಶಬ್ದಗಳು ಅಥವಾ ಪದಗಳು ನಡುಗನ್ನಡದಲ್ಲಿ ಸ್ವರಾಂತ್ಯವಾದವು.

ಕಣ್>ಕಣ್ಣು ಕಾಲ್>ಕಲು

ಮಣ್ಣ್>ಮಣ್ಣು ಕಾಯ್>ಕಯಿ

ತಿನ್>ತಿನ್ನು ಕೇಳ್>ಕೇಳು

ಸಂಯುಕ್ತಾಕ್ಷರಗಳು ನಡುಗನ್ನಡದಲ್ಲಿ ವಿರಳಾಕ್ಷರಗಳಾಗುವುದು

ಆರ್ಗ್ಗೆ>ಯಾರಿಗೆ ಊರ್ಗ್ಗೆ>ಊರಿಗೆ

ನಡುಗನ್ನಡದಲ್ಲಿ ಸರ್ವನಾಮಗಳಲ್ಲಿನ ಮ ಕಾರ ವ ಕಾರ ವಾಗುತ್ತದೆ.

ನಾಮ್>ನಾವು ನೀಮ್>ನೀವು ತಾಮ್>ತಾವು

ಅಂ, ಆನು ಪ್ರತ್ಯಗಳು ನ.ಗ.ದ ನಾಮಪದಗಳಲ್ಲಿ ಲೋಪವಾಗುತ್ತದೆ.

ರಾಮಂ>ರಾಮ ತಂದನು>ತಂದ

ಮಾಡಿದನ್>ಮಾಡಿದ ಬಂದನ್>ಬಂದ

ನಡುಗನ್ನಡದಲ್ಲಿ ವಿರಳಾಕ್ಷರಗಳು ಒತ್ತಕ್ಷರಗಳಾಗುವುದು.

ಕಲ್>ಕಲು>ಕಲ್ಲು ಪಲ್>ಪಲು>ಪಲ್ಲು

ಮಣ್>ಮಣು>ಮಣ್ಣು ಕಣ್>ಕಣು>ಕಣ್ಣು

ಸಂಸ್ಕೃತ ಕನ್ನಡ ಪದಗಳನ್ನು ಸೇರಿಸಿ ಸಮಾಸ ಪದಗಳ ಬಳಕೆ ನಡುಗನ್ನಡದಲ್ಲಿ ಸ್ವೇಚ್ಛೆಯಾಗಿ ಬಳಕೆಯಾಗತೊಡಗಿದವು. ರಳ ಕುಳ ಗಳು ನಶಿಸಿಹೋದವು.

ಪಾಱು>ಹಾರು ಆೞು>ಆಳು

ಆಱು>ಆರು ಪಾೞು>ಪಾಳು

ನಡುಗನ್ನಡದಲ್ಲಿ ಬಹುವಚನ ಪ್ರತ್ಯಯದಲ್ಲಿ ಅನುನಾಸಿಕತ್ವ ಮರೆಯಾಯಿತು

ಮರಂಗಳ್>ಮರಗಳು ಕೊಳಂಗಳ್>ಕೊಳಗಳು

ನಡುಗನ್ನಡದಲ್ಲಿ ಪದಾದಿ ಪಕಾರ ಹ ಕಾರವಾಗುವುದರ ಜೊತೆ ಪದಾಂತ್ಯದ ಪ ಕಾರವು ಹ ಕಾರವಾಯಿತು

ಇಂತಪ್ಪ>ಇಂತಹ ಅಂತಪ್ಪ>ಅಂತಹ

**ಹೊಸಗನ್ನಡ**

ಹೊಸಗನ್ನಡದ ಕಾಲ ಹದಿನೆಂಟನೇ ಶತಮಾನದಿಂದ ಇಲ್ಲಿಯವರೆಗೂ. ಹೊಸಗನ್ನಡ ಅನ್ಯ ಭಾಷಿಕರ ದಾಳಿ, ಕೊಳು-ಕೊಡೆಯ ಪರಿಣಾಮವಾಗಿ ಅರಬ್ಬೀ, ಉರ್ದು, ಪಾರ್ಸಿ, ಪೋರ್ಚುಗೀಸ್, ಇಂಗ್ಲೀಷ್ ಶಬ್ದಗಳು ಹೊಸಗನ್ನಡದಲ್ಲಿ ಸೇರಿದವು. ಇದರಿಂದ ಹಲವು ಭಾಷಿಕ ರೂಪಗಳು ಉಂಟಾದವು. ಹೊಸಗನ್ನಡದಲ್ಲಿ ನಡುಗನ್ನಡದ ತೀವ್ರ ಬದಲಾವಣೆ ಕಂಡಿತು.

ಫ಼, ಜ಼ ಖ಼ ಧ್ವನಿಗಳು ಹೊಸಗನ್ನಡಕ್ಕೆ ಸೇರ್ಪಡೆಯಾದವು.

ಫ಼ಕೀರ, ಫ಼ೈನ್, ದವಾಖ಼ಾನೆ, ವಜ಼ನ್, ಡಜ಼ನ್, ಫ಼ಾಯಿದೆ, ಖ಼ಾನಾವಳಿ, ಕಾಫ಼ಿ

ಹೊಸಗನ್ನಡದಲ್ಲಿ ಇಲ್ಲ ಎಂಬ ನಿಷೇದ ರೂಪ ಬಳಕೆಗೆ ಬಂದಿತು ನೀಡೆ>ನೀಡುವುದಿಲ್ಲ, ಮಾಡೆ>ಮಾಡುವುದಿಲ್ಲ. ವರ್ತಮಾನ ಪೂರ್ಣಕ್ರಿಯಾಪದಕ್ಕೆ ಏನೆ, ಏವೆ, ಈ, ಆನೆ, ಆಳೇ, ಅರೆ, ಅವೆ, ಇದೆ, ಇವೆ ಎಂಬ ಅಖ್ಯಾತ ಪ್ರತ್ಯಯಗಳು ಕನ್ನಡದಲ್ಲಿವೆ. ವರ್ತಮಾನಕಾಲ, ಭೂತಕಾಲ, ಭವಿಷ್ಯತ್ಕಾಲದ ಬರಹದಲ್ಲಿ ಮಾತ್ರ ಬೇರೆ ಬೇರೆ ಕಂಡು ಬಂದು ಆಡುಮಾತಿನಲ್ಲಿ ವರ್ತಮಾನ ಕಾಲ, ಭವಿಷ್ಯತ್ ಕಾಲದಲ್ಲಿ ಐಕ್ಯವಾಯಿತು. ಹಳಗನ್ನಡಕ್ಕಿಂತ ಹೊಸಗನ್ನಡ ಹೆಚ್ಚು ಸರಳವಾದ ಭಾಷೆಯಾಯಿತು.

ಹಳಗನ್ನಡದ ದೀರ್ಘ ಸಮಾಸಗಳು ಹೊಸಗನ್ನಡದಲ್ಲಿ ಹ್ರಸ್ವವಾಗಿ ಸಮಾಸದ ಎರಡು ಪದಗಳು ಬೇರೆ ಬೇರೆಯಾಗಿ ನಿಂತವು.

ಕ್ರಮದಪ್ಪು>ಕ್ರಮತಪ್ಪು        ಕೌತುಕಾದಾಳ್>ಕೌತುಕ ತಾಳು

ಪ್ರಥಮ ಪುರುಷ ಸರ್ವನಾಮದ ಪುಲ್ಲಿಂಗ ಪ್ರತ್ಯಯ ಅನು ಹೊಸಗನ್ನಡದಲ್ಲಿ ಅ ಆಗಿದೆ

ಅವನು>ಅವ        ಇವನು>ಇವ

ಬಂದನು>ಬಂದ        ತಿಂದನು>ತಿಂದ

ಹಳಗನ್ನಡದ ವ್ಯಂಜನಾಂತ ಶಬ್ದಗಳು ಹೊಸಗನ್ನಡದಲ್ಲಿ ಸ್ವರಾಂತವಾಗುತ್ತವೆ.

ಕಾಲ್>ಕಾಲು        ಕೇಳ್>ಕೇಳು

ನಡುಗನ್ನಡದ ಸರಳ ವ್ಯಂಜನಯುಕ್ತ ಪದಗಳು ಹೊಸಗನ್ನಡದಲ್ಲಿ ದ್ವಿತ್ವವಾಗುತ್ತವೆ.

ಕಲು>ಕಲ್ಲು        ಅಲಿ>ಅಲ್ಲಿ

ಹೊಸಗನ್ನಡದಲ್ಲಿ ಚ ಕಾರವು ಸ ಕಾರವಾಗಿದೆ.

ಚಾಪೆ>ಸಾಪೆ, ಚೂರ್ಣ>ಸೂರ್ಣ

ಹೊಸಗನ್ನಡದ ಕೆಲವು ಭಾಷಾ ಪ್ರಭೇದಗಳಲ್ಲಿ ಪದಗಳು ಲೋಪಗೊಂಡು ಆಡುಮಾತಿನಲ್ಲಿ ಸಂಯುಕ್ತ ವ್ಯಂಜನಗಳು ಕಂಡು ಬರುತ್ತವೆ.

ಹೊರಡು>ಹೊರ್ಡು        ಕೊಡಲಿ>ಕೊಡ್ಲಿ

ಮರಳು>ಮಳ್ಳು        ಅಡಕೆ>ಅಡ್ಕೆ

ಹೊಸಗನ್ನಡದಲ್ಲಿ ಮಹಾಪ್ರಾಣಗಳು ಬ್ರಾಹ್ಮಣರು ಮತ್ತು ವಿದ್ಯಾವಂತರು ಮಾತ್ರ ಬಳಸುತ್ತಿದ್ದು ಬರಹದ ಮಟ್ಟಿಗೆ ಉಳಿದುಕೊಂಡಿದೆ. ಬಹುತೇಕರ ಆಡುಮಾತಿನಲ್ಲಿ ಬಳಕೆಯಲ್ಲಿ ಇಲ್ಲ.

ಕಥೆ>ಕತೆ        ಖಾಲಿ>ಕಾಲಿ        ಖರ್ಚು>ಕರ್ಚು

ಘಂಟೆ>ಗಂಟೆ        ಫಲ>ಪಲ        ಸಭೆ>ಸಬೆ

# ಉಪಸಂಹಾರ

ಕರ್ನಾಟಕದಲ್ಲಿ ಆರುಕೋಟಿಗಿಂತಲೂ ಅಧಿಕ ಜನ ವಾಸಿಸುತ್ತಿದ್ದಾರೆ. ಇವರೆಲ್ಲರ ಕನ್ನಡ ಒಂದೇ ರೀತಿಯಾಗಿಲ್ಲ. ಇದು ಕನ್ನಡದ ಹಲವು ಉಪಭಾಷೆಗಳಿಗೆ ಕಾರಣವಾಗಿದೆ. ಈ ಹಿಂದೆ ಅನ್ಯ ಭಾಷಿಕರ ದಾಳಿಯಿಂದಾಗಿ ಮಹಮದೀಯು ದಾಳಿ, ಮರಾಠರ ದಾಳಿ ಇತ್ಯಾದಿ ಮತ್ತು ಗಡಿ ಪ್ರದೇಶಗಳಲ್ಲಿ ಅನ್ಯ ಭಾಷೆಗಳಾದ ತಮಿಳು, ತೆಲಗು, ಮಲೆಯಾಳ, ಕೊಂಕಣಿ ಮೊದಲಾದವುಗಳ ಪ್ರಭಾವದಿಂದ ಪ್ರಾದೇಶಿಕ ಉಪಭಾಷೆಗಳಿಗೆ ಕಾರಣವಾಗಿದೆ. ಇಂದು ಇಂಗ್ಲಿಷ್‌ನ ಪ್ರಭಾವ ಹೆಚ್ಚಿನದಾಗಿ ಕನ್ನಡದ ಮೇಲೆ ಆಗಿದ್ದರೂ ಅದರಿಂದ ಯಾವುದೇ ಉಪಭಾಷೆಗಳು ನಿರ್ಮಾಣವಾಗಿಲ್ಲ. ಇಂದು ಜನರ ನಡುವೆ ಸಂಪರ್ಕವು ಸುಲಭವಾಗಿರುವುದು, ಶಿಕ್ಷಣದಲ್ಲಿರುವ ಭಾಷಾನೀತಿ, ಹಲವು ಭಾಷೆಗಳನ್ನು ಕಲಿಯುವ ಅಗತ್ಯ, ಬುಡಕಟ್ಟುಗಳನ್ನು ನಾಗರೀಕ ಜೀವನಕ್ಕೆ ಬದಲಾಯಿಸುತ್ತಿರುವುದು ಉಪಭಾಷೆಗಳು ಮಸುಕಾಗುತ್ತಿರುವುದಕ್ಕೆ ಕಾರಣವಾಗಿದೆ. ಭಾಷೆಯೊಂದಕ್ಕೆ ಇದು ಸಹಜ ಬೆಳವಣಿಗೆ. ಏಕೆಂದರೆ ಉಪಭಾಷೆಗಳಿಗೆ ಸುದೀರ್ಘ ಇತಿಹಾಸವಿರುವುದಿಲ್ಲ. ಕಾಲಕ್ಕೆ ತಕ್ಕಂತೆ, ಪರಿಸ್ಥಿತಿ, ಸಂದರ್ಭಗಳಿಗೆ ತಕ್ಕಂತೆ ಉಪಭಾಷೆಗಳು ಹೆಚ್ಚಾಗಬಹುದು, ಇಲ್ಲವೆ ಕಡಿಮೆಯಾಗಬಹುದು. ಕನ್ನಡದಲ್ಲಿ ಇಂದು ಇರುವ ಉಪಭಾಷೆಗಳು ಹತ್ತನೇ ಶತಮಾನದಲ್ಲಿ ಇರಲಿಲ್ಲ. ಉಪಭಾಷೆಗಳು ಅಯಾ ಭಾಷೆಯ ಜೀವಂತಿಕೆಯ ಲಕ್ಷಣವಾಗಿರುತ್ತದೆ.

ಕನ್ನಡದ ಉಪಭಾಷೆಗಳೆಂದರೆ ಕನ್ನಡದ ಆಡುಮಾತಿನ ಬೇರೆ ಬೇರೆ ಭಾಷಿಕ ರೂಪಗಳು. ಇವುಗಳು ಬರಹದ ಸ್ವರೂಪದಲ್ಲಿ ಇಲ್ಲ. ಬರಹದ ಕನ್ನಡಕ್ಕೂ ಆಡುಮಾತಿನ ಕನ್ನಡಕ್ಕೂ ಸಾಕಷ್ಟು ವ್ಯತ್ಯಾಸಗಳಿವೆ. ಉಪಭಾಷೆಗಳ ಅಧ್ಯಯನದಿಂದಾಗಿ ಕನ್ನಡ ಭಾಷೆಯ ಧ್ವನಿ ಸ್ವರೂಪವನ್ನು ನಿರ್ಣಯಿಸಬಹುದಾಗಿದೆ. ಬರಹದ ಕನ್ನಡದಲ್ಲಿ ಹದಿನಾಲ್ಕು ಸ್ವರಗಳು, ಎರಡು ಯೋಗವಾಹಕಗಳು, ಇಪ್ಪತ್ತೈದು ವರ್ಗೀಯ ವ್ಯಂಜನಗಳು, ಒಂಭತ್ತು ಅವರ್ಗೀಯ ವ್ಯಂಜನಗಳನ್ನು ಬಳಸಲಾಗುತ್ತಿದೆ. ಮೂಲತಃ ಆಡು ಮಾತಿನ ಕನ್ನಡದಲ್ಲಿ ಇವುಗಳೆಲ್ಲ ಬಳಕೆಯಲ್ಲಿಲ್ಲ. ಸಂಸ್ಕೃತಕ್ಕೆ ತಕ್ಕಂತೆ ಬರಹದ ಕನ್ನಡವನ್ನು ಹೊಂದಿಸಿಕೊಂಡ ಪರಿಣಾಮ ಈ ವರ್ಣ ಮಾಲೆ ಬರಹದ ಕನ್ನಡಕ್ಕೆ ಸಿದ್ದಿಸಿದೆ. ಕನ್ನಡದ ಪ್ರಾದೇಶಿಕ ಮತ್ತು ಸಾಮಾಜಿಕ ಉಪಭಾಷೆಗಳನ್ನು ಪರಶೀಲಿಸಿದಾಗ ಹತ್ತು ಸ್ವರ, ಒಂದು ಅನುಸ್ವಾರ, ಹದಿಮೂರು ವ್ಯಂಜನಗಳು, ಏಳು ಅವರ್ಗೀಯ ವ್ಯಂಜನಗಳು ಮುಖ್ಯವಾಗಿರುವುದು ಕಂಡುಬರುತ್ತದೆ. ಅ, ಇ, ಉ, ಎ, ಒ, ಐದು ಹ್ರಸ್ವ ಸ್ವರಗಳು, ಆ, ಈ, ಊ, ಏ, ಓ ದೀರ್ಘ ಸ್ವರಗಳು ಎಲ್ಲಾ ಉಪಭಾಷೆಗಳಲ್ಲಿ ಬಳಕೆಯಲ್ಲಿವೆ. ಅನುಸ್ವಾರದ ಬಳಕೆಯೂ ಇದೆ. ವ್ಯಂಜನಗಳಲ್ಲಿ ವರ್ಗದ

ಮೊದಲ ಅಕ್ಷರಗಳು ಕ ವರ್ಗ, ಚ ವರ್ಗದಲ್ಲಿ ಇದ್ದರೆ, ಟ ವರ್ಗ, ತ ವರ್ಗ, ಪ ವರ್ಗದಲ್ಲಿ ಆಯಾ ವರ್ಗದ ಪ್ರಥಮ, ತೃತೀಯ, ಅಂತ್ಯಾಕ್ಷರಗಳು ಮಾತ್ರಾ ಉಪಭಾಷೆಯಲ್ಲಿ ಸಹಜವಾಗಿದೆ. ಮಹಾಪ್ರಾಣಗಳು ಕನ್ನಡ ಉಪಭಾಷೆಗಳಲ್ಲಿ ಸಹಜವಾಗಿ ಇಲ್ಲ. ಉರ್ದು, ಮರಾಠಿ, ಇಂಗ್ಲೀಷ್‌ನ ಪ್ರಭಾವದಿಂದ ಫ಼, ಝ಼, ಖ಼ ಮಹಾಪ್ರಾಣಾಕ್ಷರಗಳು ಕನ್ನಡದ ಧ್ವನಿ ಪಟ್ಟಿಯಲ್ಲಿ ಸ್ಥಾನ ಪಡೆಯುತ್ತವೆ. ಬರಹದ ಮಟ್ಟಿಗೆ ಕನ್ನಡದಲ್ಲಿ ಮಹಾಪ್ರಾಣಗಳ ಅಸ್ಥಿತ್ವವಿದೆ. ದಿನನಿತ್ಯದ ಆಡುಮಾತಿನ ರೂಪದಲ್ಲಿ ಇದರ ಸಹಜ ಬಳಕೆ ಇಲ್ಲ. ಹಳಗನ್ನಡದ ರಳ, ಕುಳ ಅಳಿದಂತೆ ಒಂದು ಕಾಲಕ್ಕೆ ಕನ್ನಡ ಭಾಷೆಯ ಬರಹದಲ್ಲಿ ಮಹಾಪ್ರಾಣಗಳು ಅಳಿದರೆ ಆಶ್ಚರ್ಯ ಪಡಬೇಕಿಲ್ಲ. ಬರಹದಲ್ಲಿ ಅರ್ಥವ್ಯತ್ಯಾಸವಾಗದಿದ್ದರೆ ಮಹಾಪ್ರಾಣಕ್ಷರಗಳನ್ನು ಕೈ ಬಿಡಬಹುದು. ಹೀಗೆ ಬರವಣಿಗೆಯಲ್ಲಿ ಮಹಾಪ್ರಾಣಾಕ್ಷರಗಳನ್ನು ತ್ಯಜಿಸುವುದರಿಂದ ಅರ್ಥ ವ್ಯತ್ಯಾಸವಾಗುವ ಪದಗಳ ಸಂಖ್ಯೆ ಕಡಿಮೆಯೆ.

ಕನ್ನಡದ ಉಪಭಾಷೆಗಳಲ್ಲಿ ಐ, ಔ ಗಳ ಬಳಕೆ ಇಲ್ಲ. ಅವುಗಳ ಬದಲಿಗೆ ಅಯ್. ಅವ್ ರೂಪಗಳು ಬಳಕೆಯಾಗುತ್ತಿದೆ. ಹಾಗೆಯೇ ಶ, ಷ ಊಷ್ಮಧ್ವನಿಗಳ ಬಳಕೆ ಕನ್ನಡದ ಉಪಭಾಷೆಗಳಲ್ಲಿ ಸಾರ್ವತ್ರಿಕ ಬಳಕೆ ಇಲ್ಲ. ಅದರ ಬದಲಿಗೆ ಸ ಕಾರವೇ ಹೆಚ್ಚು ಬಳಕೆಯಲ್ಲಿದೆ. ಮರಾಠಿ ಪ್ರಭಾವಿತ ಕನ್ನಡದಲ್ಲಿ ಮಾತ್ರ ಶ ಕಾರದ ಬಳಕೆಯಿದೆ. ಬರಹದ ಕನ್ನಡದಲ್ಲಿ ಶ, ಷ ಬಳಕೆಯಲ್ಲಿ ಗೊಂದಲವಿದೆ. ಶೇಕ್ಸಪಿಯರ್ ಎಂಬ ಒಂದೇ ಪದವನ್ನು ಷೇಕ್ಸಪಿಯರ್ ಎಂದೂ ಬರೆಯುವುದನ್ನು ಕಾಣುತ್ತೇವೆ. ಕನ್ನಡದ ಉಪಭಾಷೆಗಳಲ್ಲಿ ಉಚ್ಚಾರಣೆಯ ಒತ್ತಡದಿಂದ ಅಲ್ಪ ಪ್ರಾಣ ಮಹಾಪ್ರಾಣಗಳಾಗಿಯೂ, ಸ್ವರಗಳು ದೀರ್ಘ ಸ್ವರಗಳಾಗಿಯೂ ಬದಲಾಗುತ್ತದೆ. ವಿಜಾತೀಯ ವ್ಯಂಜನಗಳು ಸಜಾತೀಯ ವ್ಯಂಜನಗಳಾಗಿ ಬದಲಾಗಬಹುದು. ಕೊರಳು>ಕೊಳ್ಳು, ತರಳು>ತಳ್ಳು. ಮೂರು ಅಕ್ಷರಗಳಿರುವ ಪದಗಳಲ್ಲಿ ಸಾಮಾನ್ಯವಾಗಿ ಎರಡನೇ ಅಕ್ಷರ ಲೋಪವಾಗುತ್ತದೆ. ಕರಡಿ>ಕರ್ಡಿ>ಕಡ್ಡಿ, ಮರಳು>ಮಳ್ಳು, ಅರಳು>ಅಳ್ಳು, ಕೆಲವು ಶಬ್ದಗಳಲ್ಲಿ ಎ ಕಾರ ಇ ಕಾರವಾಗುವಿಕೆ ಉಪಭಾಷೆಗಳಲ್ಲಿ ಬೇರೆ ಬೇರೆ ರೀತಿಯಾಗಿದೆ. ಮೈಸೂರು ಕನ್ನಡದಲ್ಲಿ ಶಬ್ದಾಂತ್ಯದ ಎ ಕಾರ ಇ ಕಾರವಾಗುವುದಿಲ್ಲ. ಆನೆ, ಕುದುರೆ, ಮನೆ, ತಲೆ. ಗುಲ್ಬರ್ಗಾ ಕನ್ನಡದಲ್ಲಿ ಇ ಕಾರಾಂತವಾಗುತ್ತವೆ. ಆನೆ, ಕುದ್ರಿ, ಮನಿ, ತಲಿ, ಇವು ಚಾಮರಾಜನಗರದ ಕನ್ನಡದಲ್ಲಿ ಅ ಕಾರವಾಗುತ್ತವೆ. ಆನ, ಮನ, ತಲ, ಕೆರ.

ಧಾರವಾಡ ಕನ್ನಡ, ಗುಲ್ಬರ್ಗಾ ಕನ್ನಡದಲ್ಲಿ ನಾಮಪದಗಳ ಅಂತ್ಯದ ಉ ಕಾರ ಅ ಕಾರವಾಗುತ್ತದೆ. ಮೈಸೂರು ಕನ್ನಡದಲ್ಲಿ ಇದು ಕ್ವಚಿತ್ತಾಗಿ ಬಳಕೆಯಲ್ಲಿದೆ. ಮುಳ್ಳು>ಮುಳ್ಳ, ಮೀನು>ಮೀನ, ಬಲ್ಲು>ಬರ್ಲ, ಬೆರಳು>ಬೆಳ್ಳ.

ಕನ್ನಡದ ಎಲ್ಲಾ ಉಪಭಾಷೆಗಳಲ್ಲಿ ಶಬ್ದಾದಿಯ ಉ ಕಾರ ಯ ಕಾರವನ್ನು ಪಡೆದರೆ ಒ ಕಾರವು ವ ಕಾರವಾಗುತ್ತದೆ. ಎಲೆ>ಯಲೆ, ಪೇಟೆ>ಪ್ಯಾಟಿ, ಒಲೆ>ವಲೆ, ತೊಲೆ>ತ್ವಲೆ. ಕನ್ನಡದ ಆಡುಮಾತಿನ ರೂಪಗಳಲ್ಲಿ ವ್ಯಂಜನಾಂತವೇ ಹೆಚ್ಚಿನ ಶಬ್ದಗಳಲ್ಲಿ ಬಳಕೆಯಲ್ಲಿದೆ. ತಿನ್, ಕಾಲ್, ಕಲ್, ಹೋದ್, ತಂದ್, ಬಂದ್. ಉಪಭಾಷೆಗಳಲ್ಲಿ ವ ಕಾರ ಇ ಕಾರವಾಗುತ್ತದೆ. ವಿದಿ>ಇದಿ, ವಿಷ>ಇಷ, ವಿಮಾನ>ಇಮಾನ, ಹೊಸಗನ್ನಡದ ಉಪಭಾಷೆಗಳಲ್ಲಿ ಹ ಕಾರವು ಅಳಿದು ಸ್ವರ ಮಾತ್ರ ಉಳಿದಿದೆ. ಹಾಲು>ಆಲು, ಹಕ್ಕಿ>ಅಕ್ಕಿ, ಹರಿಜನ>ಅರಿಜನ, ಹೋದ>ಓದ. ಸ್ವೀಕೃತವಾದ ನಾಮಪದಗಳು ಕನ್ನಡದಲ್ಲಿ ಉ ಕಾರಾಂತವಾಗಿ ಬಳಕೆಯಾಗುತ್ತದೆ. ಬಸ್ಸು, ಕಾರು, ಹರಾಜು, ಆದರೆ ಇವು ಪ್ರತ್ಯಯಗಳೊಂದಿಗೆ ಬರುವಾಗ ವ್ಯಂಜನಾಂತವಾಗಿಯೇ ಪ್ರಯೋಗವಾಗುತ್ತವೆ.

ಕನ್ನಡದ ಉಪಭಾಷೆಗಳಲ್ಲಿ ಏಕವಚನಕ್ಕೆ ಪ್ರತ್ಯೇಕ ಪ್ರತ್ಯಯವಿಲ್ಲ. ಬಹುವಚನದಲ್ಲಿ ರು, ಅರ, ಅರು, ಈರು, ಏರು, ಅಂದ್ರು, ದಿರು, ದೀರು, ದೇರು, ನಪುಂಸಕಲಿಂಗಕ್ಕೆ ಕ್ಕಳು, ಕ್ಕಳ್, ಕ್ಳು, ದಿಕ್ಳು, ಅಕ್ಳೊ, ಗಳು, ಗೊಳು, ಗ್ಳು ಪ್ರತ್ಯಯಗಳಿವೆ. ಉಪಭಾಷೆಗಳಲ್ಲಿ ಪುಲ್ಲಿಂಗ, ಸ್ತ್ರೀಲಿಂಗ. ನಪುಂಸಕ ಲಿಂಗವಿವಕ್ಷೆಯಿದೆ. ಸ್ತ್ರೀಲಿಂಗ ಕೆಲವೊಮ್ಮೆ ನಪುಂಸಕಲಿಂಗದಲ್ಲಿಯೇ ಐಕ್ಯವಾಗುತ್ತದೆ. ಕನ್ನಡದ ಬೇರೆ ಬೇರೆ ಉಪಭಾಷೆಗಳು ತಮ್ಮದೇ ಆದ ವಿಭಕ್ತಿ ಸಂಪಾದಿಸಿಕೊಡಿವೆ. ಈ ಉಪಭಾಷೆಗಳಲ್ಲಿ ಪ್ರಥಮ ವಿಭಕ್ತಿಗೆ ಪ್ರತ್ಯೈಕ ಪ್ರತ್ಯಯವಿಲ್ಲ. ಪಂಚಮಿಯಾರ್ಥದಲ್ಲಿ ತೃತಿಯೆಯೇ ಬಳಕೆಯಾಗುತ್ತದೆ. ಕೆಲವೊಮ್ಮೆ ದ್ವಿತೀಯಾ ವಿಭಕ್ತಿ ಕೆಲಸವನ್ನು ಚತುರ್ಥಿವಿಭಕ್ತಿಯು ನಿರ್ವಹಿಸುವುದೂ ಉಂಟು. ಹೀಗಾಗಿ ಕನ್ನಡದಲ್ಲಿ ಆರು ವಿಭಕ್ತಿಗಳು ಬಳಕೆಯಲ್ಲಿವೆ. ಹೀಗೆ ಕನ್ನಡದ ಉಪಭಾಷೆಗಳಲ್ಲಿ ಆಗಿರುವ ಬದಲಾವಣೆಗಳನ್ನು ಸ್ಥೂಲವಾಗಿ ಗುರುತಿಸಿ ಕೊಳ್ಳಬಹುದು.

ಕನ್ನಡದ ಉಪಭಾಷೆಗಳಲ್ಲಿರುವ ವೈವಿಧ್ಯತೆಯು ಬರಹದ ಕನ್ನಡದಲ್ಲಿ ಇಲ್ಲ. ಉಪಭಾಷೆಗಳಿಗೂ ಬರಹದ ಕನ್ನಡಕ್ಕೂ ಸಾಕಷ್ಟು ಅಂತರವಿದೆ. ಮೈಸೂರು ಕನ್ನಡ ಬರಹದ ಕನ್ನಡಕ್ಕೆ ಹತ್ತಿರದಲ್ಲಿದೆ.

ಭಾಷೆಯೊಂದಕ್ಕೆ ಪ್ರಮಾಣಭಾಷೆಯೊಂದು ಇರುತ್ತದೆ. ಇದು ಯಾರ ಆಡುಮಾತೂ ಆಗಿರುವುದಿಲ್ಲ. ಭಾಷೆಗೆ ಇರುವ ಬೇರೆ ಬೇರೆ ಭಾಷಾ ರೂಪಗಳನ್ನು ಕಡಿಮೆಮಾಡಿ ವ್ಯವಸ್ಥಿತವಾದ ಒಂದು ಭಾಷಾ ರೂಪವನ್ನು ಅಧಿಕೃತವೆಂದು ಒಪ್ಪಿಕೊಳ್ಳುವುದು ಪ್ರಮಾಣ ಭಾಷೆ ಎನಿಸುಕೊಳ್ಳುತ್ತದೆ. ಈ ಪ್ರಮಾಣಭಾಷೆಯು ಆಡಳಿತ, ಶಿಕ್ಷಣ, ಸಮೂಹ ಮಾಧ್ಯಮಗಳಲ್ಲಿ ಬಳಕೆಯಲ್ಲಿರುತ್ತದೆ. ಎಲ್ಲಾ ಪ್ರದೇಶಗಳ ,ಸಮಾಜಗಳ ಜನರನ್ನು ಒಂದೇ

ದಾರದಲ್ಲಿ ಬೆಸೆಯುವ ಪ್ರಯತ್ನವನ್ನು ಪ್ರಮಾಣಭಾಷೆ ಮಾಡುತ್ತಿರುತ್ತದೆ. ಇದರಿಂದ ಉಪಭಾಷಾ ವೈವಿಧ್ಯತೆಗಳು ನಶಿಸಬಹುದು. ಪ್ರಮಾಣ ಭಾಷೆಯು ಒಂದು ನಿರ್ದಿಷ್ಟಕಾಲದಲ್ಲಿ ರಾಜಕೀಯ, ಸಾಮಾಜಿಕ ಜವಬ್ದಾರಿಯನ್ನು ಹೊರಬೇಕಾಗುತ್ತದೆ.

ಕನ್ನಡದ ಉಪಭಾಷೆಗಳು ಬರಹದಲ್ಲಿ ಇಲ್ಲದಿರುವುದು ಅದರ ಸ್ವರೂಪ ದಾಖಲೆಯಾಗುವುದಕ್ಕೆ ಅಡ್ಡಿಯುಂಟುಮಾಡಿದೆ. ಉಪಭಾಷೆಗಳು ಬರಹದಲ್ಲಿ ಬಳಕೆಯಾಗುವುದು ಪ್ರಾಚೀನಕಾಲದಿಂದಲೂ ಇದ್ದಂತೆ ಕಾಣುವುದಿಲ್ಲ. ಪ್ರಾಚೀನ ಕವಿಗಳು ದೇಸಿ ಹೆಸರಿನಲ್ಲಿ ಕಾವ್ಯದ ಸೊಗಸಿಗೆ ಆಡುಮಾತನ್ನು ಬಳಸಿಕೊಂಡರೂ ಅದರ ಪ್ರಮಾಣ ಅತ್ಯಲ್ಪವಾಗಿದೆ. ಇಂದು ಉಪಭಾಷೆಗಳು ಬರಹದಿಂದ ದೂರವೇ ಉಳಿದಿದೆ. ಉಪಭಾಷೆ ಬರಹದ ರೂಪ ಪಡೆದರೂ ಸೋಸುವಿಕೆಗೆ ಒಳಗಾಯಿತು. ಉದಾ: 'ಸಿರಿಗರ ಬಡಿದವರ ನುಡಿಸಲು ಬಾರದು,' 'ಹುತ್ತವ ಬಡಿದರೆ ಹಾವು ಸಾಯಬಲ್ಲುದೆ ಅಯ್ಯಾ' ಇತ್ಯಾದಿ. ಹೊಸಗನ್ನಡದಲ್ಲಿ ಉಪಭಾಷೆಗಳು ಯಥಾವತ್ತಾದ ಸಾಹಿತ್ಯ ದಾಖಲೆಗೆ ಒಳಗಾಯಿತು. ವಿವಿಧ ವರ್ಗ,ಸಮುದಾಯ, ಪ್ರದೇಶಗಳಿಂದ ಬಂದ ಸಾಹಿತಿಗಳು ತಮ್ಮ ಆಡುನುಡಿಯನ್ನು ಸಾಹಿತ್ಯದಲ್ಲಿ ಬಳಸಿದರು.

"ಅಯ್ಯೋ ಬಿದ್ದಿದು ಹಂದ್ಯಲ್ಲ
ಯಾರೋ ಕಿಡಿಗೇಡಿಗಳು ಕರೀ ಅರಿವ್ಯಾಗ ಹುಲ್ಲು ಕಟ್ಟಿ ಒಗೆದಾರ"

(ತೂತಿನದುಡ್ಡು ಮತ್ತು ನೀರು/ಅರವಿಂದ ಮಾಲಗತ್ತಿ)

"ಏನ್ ಹೇಳಬೇಕಣಾ, ಹೇಳಾಕ ಬರ್ಲಾರ್ದ ಮಾತು, ಒಂದಿನ ರಾತ್ರ್ಯಾಗಿರಬೇಕು ನನಿಗ್ ನಿದ್ದಿ ಹತ್ತಿತು. ಒಮ್ಮೆಲಿಗೆ ಎಚ್ರಾಯ್ತು ಯಾರೋ ಎದಿಮ್ಯಾಲೆ ಕೈಯಿಟ್ಟಂಗಾಯ್ತು. ಆತನೇ ಇರಬೇಕಂತ ತಿಳ್ದು ನಡ್ಯಾ ಆ ಕಡಿ ಅಂದ್ ಕೈ ಜಾಡ್ಸಿ ತಿರಿಗಿ ಮಲಿಗ್ದೆ ಅವ್ವರಗ ಕೈ ತೋಳಿನ ಮೇಲೆ ಬಿತ್ತು ಅನುಮಾನಾಯ್ತು ಎದ್ ಕುಂತೆ ಕಡ್ಡಿ ಕೊರ್ದು ಚಿಮ್ಣಿ ಹಚ್ಚಿದೆ, ಹಾಸಿಗೆ ಮ್ಯಾಲೆ ಕುಂತವ ಗುರಪ್ಪ ಮೈಯೆಲ್ಲಾ ಬೆಂಕಿಬಿದ್ದಂಗಾಯ್ತು. "ಹತ್ ಬಾಡ್ ಖಾವ್" ಅಂತ್ ಟೊಂಕಕ್ ಸುತ್ತಿದೆ ಅವ್ನು ನಡಿಕೆಂತ ಎದ್ನಿಂತ" (ಮುಲ್ಕಮ್ಮ/ಶಾಂತರಸ)

ಶರಣು ಶರಣೆಂಬೆ ನೆಚ್ಚಿನ ನಾಡ
ನೀ/ ಸೂರ್ಯನ ಮೆಚ್ಚಿನಾಕಿ ನೋಡ
ಮೂಡಲ/ಕಡಲಾಗ ಮುತ್ತುಹುಟ್ಟಿದಾಂಗ
ಇಂದ್ರನ ಬನಾನ ಕರಕೊಂಡು ಬಿತ್ತೋ ಹೀಂಗ

(ನಮ್ಮಕೊನೆಯ ಶರಣು/ ದ.ರಾ ಬೇಂದ್ರೆ)

ಉಪಭಾಷೆಗಳನ್ನು ಬಳಸಿಕೊಳ್ಳುವುದು ಬರಹದಲ್ಲಿ ಸಾಹಿತ್ಯದ ಮಟ್ಟಿಗೆ ಮಾತ್ರವೆ ಮೀಸಲಾಗಿದೆ. ಆಡಳಿತ ಶಿಕ್ಷಣ ಸಮೂಹ ಮಾಧ್ಯಮಗಳು ಆಡುಮಾತನ್ನು ಪ್ರಾದೇಶಿಕ, ಸಾಮಾಜಿಕ ವೈಶಿಷ್ಟ್ಯವನ್ನು ತೋರಿಸುವುದಕಷ್ಟೇ ಬಳಸುತ್ತಿವೆ. ಬರಹದ ಕನ್ನಡ ಸಾರ್ವಜನಿಕ ಪ್ರಕಟಣೆ , ಜಾಹಿರಾತು, ಘೋಷಣೆ, ಆಹ್ವಾನ ಪತ್ರಿಕೆ, ಸುತ್ತೋಲೆ, ಸೂಚನಾ ಫಲಕ ಇತರ ಕಡೆಗಳಲ್ಲಿ ತನ್ನದೇ ಆದ ಭಾಷಾ ಸ್ವರೂವನ್ನು ರೂಪಿಸಿಕೋಡಿದ್ದು ಅದು ಉಪಭಾಷೆಗಿಂತ ಭಿನ್ನವಾಗಿದೆ. ಉಪಭಾಷಾವಲಯಕ್ಕೆ ಸೇರಿದ ವ್ಯಕ್ತಿ ಆಡು ಮಾತಿನಲ್ಲಿ ಭಾಷಾ ವೈವಿಧ್ಯತೆಯನ್ನು ಉಳಿಸಿಕೊಡು ಬರಹದಲ್ಲಿ ಪ್ರಮಾಣ ಭಾಷೆಯನ್ನು ಅನುಕರಿಸುತ್ತಾನೆ. ಇದನ್ನೇ ಶಿಕ್ಷಣದ ಮೂಲಕ ಕಲಿಯುತ್ತಾನೆ. ಈ ಪ್ರಮಾಣ ಭಾಷೆ ವಿಷಯ ತಿಳಿಸುವ ಧೂತನಂತೆ, ಅದಕ್ಕೆ ಸಂವೇದನೆಯ ಅಂಚು ಉಪಭಾಷೆಗೆ ಇದ್ದಂತೆ ಇರುವುದಿಲ್ಲ. ಒಂದು ಭಾಷೆಗೆ ಹಲವು ಭಾಷಾ ರೂಪಗಳಿದ್ದಾಗ ಪ್ರಮಾಣ ಭಾಷೆಯ ಅಗತ್ಯ ಕಂಡುಬರುತ್ತದೆ. ಪ್ರಮಾಣ ಭಾಷೆಯ ಪಾರಿಭಾಷಿಕ ಪದಕೋಶ, ಧ್ವನಿ ನಿರ್ಣಯವಾಗುವಾಗ ಅದು ಉಪಭಾಷೆಯನ್ನು ಗಣನೆಗೆ ತೆಗೆದುಕೊಂಡರೆ ಉಪಭಾಷೆಗಳು ದಾಖಲೆಯಲ್ಲಿ ಉಳಿಯಬಲ್ಲದು ಮತ್ತು ಸಾರ್ವಜನಿಕ ಬಳಕೆಗೆ ಒಳಗಾಗುವುದರಿಂದ ಅದಕ್ಕೊಂದು ಭಾಷಿಕ ಸ್ವರೂಪ ಮತ್ತು ಅಸ್ತಿತ್ವ ಸಿದ್ಧಿಸುತ್ತದೆ. ಇಂದು ಕನ್ನಡ ಆಧುನಿಕ ಜಗತ್ತಿನ ತುರ್ತಿಗೆ ಮತ್ತು ಅನ್ಯ ಭಾಷೆಯಿಂದ ಸ್ವೀಕರಿಸುವ ಪದಗಳಿಗೆ ಉಪಭಾಷೆಗಳಲ್ಲಿನ ಪದಗಳನ್ನು ಆಯ್ದುಕೊಂಡು ಹೊಸ ಪದ ಟಂಕಿಸುವುದು ಹಿತವೆನಿಸುತ್ತದೆ. ಈ ನಿಟ್ಟಿನಲ್ಲಿ ಸಮೂಹ ಮಾಧ್ಯಮಗಳು ಪ್ರಯತ್ನ ಮಾಡಬೇಕಿದೆ. ಉಪಭಾಷೆಗಳ ಬಗೆಗಿನ ಅರಿವು ಭಾಷಾ ವಿಜ್ಞಾನಿಗೆ ಮಾತ್ರ ಇದ್ದರೆ ಸಾಲದು ಅದು ಎಲ್ಲರೂ ತಿಳಿದು ಕೊಳ್ಳಬೇಕಾದ ಜ್ಞಾನವಾಗಿದೆ.

ಉಪಭಾಷೆಯನ್ನು ಪ್ರಮಾಣ ಭಾಷೆಗೆ ಅಳವಡಿಸುವುದರಿಂದ ತೊಡಕುಗಳು ಉಂಟಾಗದೆ ಇರುವುದಿಲ್ಲ. ಆಡು ಮಾತು ಉಚ್ಚರಿಸುವ ವೇಗಕ್ಕನುಗುಣವಾಗಿ ಸ್ವರ ಲೋಪವಾಗುವುದು ಮತ್ತು ವ್ಯಂಜ್ಯನಾಂತವಾಗಿರುವುದು ಸಾಮಾನ್ಯ. ಅದನ್ನು ಬರಹದಲ್ಲಿ ಯಥಾವತ್ತಾಗಿ ಅನುಸರಿಸುವು ಸಾಧ್ಯವಿಲ್ಲ. ಹಾಗೆಯೇ ಉಪಭಾಷೆಗಳ ಪಾರಿಭಾಷಿಕ ಪದಕೋಶದ ಸಂಪತ್ತು ಹೇರಳವಾಗಿದೆ ಅದನ್ನು ಬರಹದ ಭಾಷೆಗೆ ತಂದಾಗ ಅದಕ್ಕೆಂದೆ ಒಂದು ಪಾರಿಭಾಷಿಕ ಪದಕೋಶವನ್ನು ತಯಾರಿಸಬೇಕಾಗುತ್ತದೆ. 'ಕುಸುಮ ಬಾಲೆ' ಕಾದಂಬರಿಯ ಎಷ್ಟೋ ಪದಗಳಿಗೆ ಒಂದು ನಿಘಂಟಿನ ಅಗತ್ಯವಿದೆ. ಪಂಪಭಾರತಕ್ಕೆ ರಚಿಸಲಾದ ಪಂಪಭಾರತ ದೀಪಿಕೆಯಂತೆ. ಬರಹದ ಭಾಷೆಯೂ ಒಂದು ದೊಡ್ಡ ಉಪಭಾಷೆಯೆ. ಅದು ದಿನನಿತ್ಯ ಬೆಳೆಯುತ್ತಿರುತ್ತದೆ, ಪದಸಂಪತ್ತನ್ನು ಬೆಳೆಸುತ್ತಿರುತ್ತದೆ. ಉದಾ:

ಪತ್ರಿಕೆಗಳಲ್ಲಿ ಜಾಗತೀಕರಣದ ಹಿನ್ನೆಯಲ್ಲಿ ನಿಶ್ಶಸ್ತ್ರೀಕರಣ, ಅಗಲೀಕರಣ, ಖಾಸಗೀಕರಣ ಪದಗಳನ್ನು ಬಳಸುವುದು ಇತ್ಯಾದಿ. ಇದು ಕನ್ನಡ ಭಾಷೆಯ ಸ್ವರೂಪವನ್ನು ದಿನದಿಂದ ದಿನಕ್ಕೆ ಬದಲಾಯಿಸುತ್ತದೆ. ಉಪಭಾಷೆಗಳು ಧ್ವನಿ ಮೂಲಕ ವ್ಯವಹರಿಸುವ ಚಲನಚಿತ್ರ, ದೂರದರ್ಶನ, ಸಂಭಾಷಣೆ, ಸಂದರ್ಶನ ಮೊದಲಾದ ಮಾಧ್ಯಮಗಳಲ್ಲಿ ಅಸ್ತಿತ್ವವನ್ನು ಕಾಯ್ದುಕೊಳ್ಳುವಂತೆ ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ವ್ಯವಹರಿಸುವ ಬರಹದಲ್ಲಿ ಸಮಗ್ರವಾಗಿ ಉಳಿಸಿಕೊಳ್ಳುವುದು ಸಾಧ್ಯವಾಗಿಲ್ಲ.

ಪ್ರಮಾಣ ಭಾಷೆಯ ಕನ್ನಡದಲ್ಲಿ ಬಳಕೆಯಾಗುತ್ತಿರುವ ಕನ್ನಡ ಪದಗಳು ಸಂಸ್ಕೃತಮಯವಾದವು. ಕನ್ನಡ ತನ್ನ ಅಗತ್ಯಕ್ಕೆ ಪದ ರೂಪಿಸಬೇಕಾದಾಗಲೆಲ್ಲಾ ಸಂಸ್ಕೃತದ ಮೊರೆಹೋದುದರ ಪರಿಣಾಮವಿದು. ಇಂದು ಇಂಗ್ಲಿಷ್‌ನ ಶಬ್ದಗಳು ಹೇರಳವಾಗಿ ಕನ್ನಡದ ಆಡುಮಾತು ಮತ್ತು ಬರಹದಲ್ಲಿ ಬಳಕೆಯಾಗುತ್ತಿರುವುದರಿಂದ ಕನ್ನಡ ಭಾಷಾಸ್ವರೂಪ ಒಂದು ಕಾಲಕ್ಕೆ ಬದಲಾಗುವ ಸಾಧ್ಯತೆಗಳಿವೆ. ಆದ್ದರಿಂದ ಭಾಷಿಕ ಪ್ರಭೇಗಳನ್ನು ಒಂದು ಚಹರೆಯನ್ನಾಗಿ ಉಳಿಸಿಕೊಳ್ಳಬೇಕಾದ ಮತ್ತು ಸಮುದಾಯಗಳ ಸಂಸ್ಕೃತಿಯನ್ನು ಒಪ್ಪಿಕೊಂಡಂತೆ ಅವರ ಭಾಷೆಯನ್ನು ಒಪ್ಪಿಕೊಂಡು ಪ್ರಮಾಣ ಭಾಷೆಯಲ್ಲಿ ಬಳಸಿಕೊಳ್ಳಬೇಕಾಗುತ್ತದೆ. ಹೀಗಾದಾಗ ಸಮಾಜದ ಕೆಳವರ್ಗಗಳು ಸಮಾಜದ ಮುಖ್ಯವಾಹಿನಿಗೆ ಬರಲು ತಮ್ಮ ಭಾಷಿಕ ಸಂಬಂಧವನ್ನು ಕಡಿದುಕೊಳ್ಳಬೇಕಾದ ಹಳಹಳಿಕೆ ಅಲ್ಪಪ್ರಮಾಣದಲ್ಲಿ ತಗ್ಗುತ್ತದೆ.

ಇಂದು ಕನ್ನಡ–ಇಂಗ್ಲಿಷ್ ಸಂಬಂಧಗಳಿಗೆ ವ್ಯಾಪಕ ವಿರೋಧವಿದೆ. ಇಂಗ್ಲಿಷ್‌ನಿಂದ ಕನ್ನಡ ನಶಿಸುತ್ತಿದೆ ಎಂಬ ಆತಂಕವಿದೆ. ಇದಕ್ಕೆ ಅಷ್ಟು ಮಹತ್ವ ಕೊಡುವ ಅಗತ್ಯವಿಲ್ಲ. ಯಾವುದು ಜನ ಸಂಪರ್ಕಗಳಿಗೆ, ಅನ್ಯಭಾಷೆಗಳೊಂದಿಗೆ ವ್ಯವಹರಿಸದೆ ಇರುವುದೋ ಆ ಭಾಷೆಯು ನಶಿಸುತ್ತದೆ. ಒಂದು ಭಾಷೆ ಹೊಸ ಹೊಸ ಸಂಪರ್ಕಗಳಿಗೆ ತೆರೆದುಕೊಂಡಂತೆ ಹೊಸ ಹೊಸ ಭಾಷಿಕ ರೂಪಗಳು ಅದಕ್ಕೆ ಸಿದ್ಧಿಸುತ್ತವೆ. ಈ ಪ್ರಯತ್ನದಲ್ಲಿ ಈ ಹಿಂದೆ ಇದ್ದ ಉಪಭಾಷಾ ರೂಪಗಳು ಅಳಿದು ಹೊಸ ಹೊಸ ಉಪಭಾಷೆಗಳು ಉಗಮವಾಗಬಹುದು. ಇದಕ್ಕೆ ಕನ್ನಡ ಭಾಷೆಯು ಹೊರತಾಗಿಲ್ಲ.

# ಕನ್ನಡದ ಪ್ರಾದೇಶಿಕ ಉಪಭಾಷೆಗಳು



## ಕನ್ನಡದ ಸಾಮಾಜಿಕ ಉಪಭಾಷೆಗಳು



\+ ಕೊರಗ ಕನ್ನಡ

* ಗೊಂಡರ ಕನ್ನಡ

\# ಕರೆ ಒಕ್ಕಲರ ಕನ್ನಡ

0 ಜೇನು ಕುರುಬರ ಕನ್ನಡ

< ಇಲ್ಲಿಗರ ಕನ್ನಡ

▶ ಸೋಲಿಗರ ಕನ್ನಡ

## ಗ್ರಂಥಸೂಚಿ

1.ಭಾಷೆ :(ಸಂ) ಕೆ.ವಿ ನಾರಾಯಣ – ಕನ್ನಡ ವಿಶ್ವವಿದ್ಯಾಲಯ ಹಂಪಿ

2.ಭಾಷೆಯ ಬಗೆಗೆ ನಿವೇನು ಬಲ್ಲಿರಿ? : ಡಿ, ಎನ್ ಶಂಕರ – ಭಾಷಾ ಪ್ರಕಾಶನ ಮೈಸೂರು

3.ಭಾರತೀಯ ಕಾವ್ಯ ಮೀಮಾಂಸೆ:ತೀ,ನಂ,ಶ್ರೀಕಂಠಯ್ಯ–ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು

4.ದ್ರಾವಿಡ ಭಾಷಾ ವಿಜ್ಞಾನ : ಹಂ, ಪ ನಾಗರಾಜಯ್ಯ– ಮೈಸೂರು

5.ಜಾನಪದ ವಿಶ್ವಕೋಶ :[ಸಂ] ಚಂದ್ರಶೇಖರ ಕಂಬಾರ–ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು

6.ಕವಿರಾಜಮಾರ್ಗ : ಸೀತರಾಮ ಜಾಗೀರದಾರ–ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ ಮೈಸೂರು

7.ಕನ್ನಡ ಜಗತ್ತು ಅರ್ಧಶತಮಾನ : ಕೆ.ವಿ ನಾರಾಯಣ – ಕನ್ನಡ ವಿಶ್ವವಿದ್ಯಾಲಯ ಹಂಪಿ

8.ಕನ್ನಡ ವಿಷಯ ವಿಶ್ವಕೋಶ ಸಂಪುಟ 1, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ ಮೈಸೂರು

9.ಕನ್ನಡ ಉಪಭಾಷೆಗಳ ಅಧ್ಯಯನ : ಕೆ. ಕೆಂಪೇಗೌಡ– ಭಾರತಿ ಪ್ರಕಾಶನ ಮೈಸೂರು

10.ಕನ್ನಡ ಮಧ್ಯಮ ವ್ಯಾಕರಣ: ತೀ.ನಂ ಶ್ರೀಂಕಠಯ್ಯ – ಗೀತಬುಕ್ ಹೌಸ್ ಮೈಸೂರು

11.ಕನ್ನಡ ಭಾಷಾ ಸ್ವರೂಪ :ಡಾ. ಸಂಗಮೇಶ ಸವದತ್ತಿಮಠ – ರೂಪರಶ್ಮಿ ಪ್ರಕಾಶನ ಧಾರವಾಡ

12.ಕನ್ನಡ ಸಾಹಿತ್ಯ ಚರಿತ್ರೆ: ರಂ.ಶ್ರೀ ಮುಗಳಿ – ಗೀತಬುಕ್ ಹೌಸ್ ಮೈಸೂರು

13.ಕನ್ನಡ ಭಾಷಾಸ್ವರೂಪ : ಕೆ. ಕೆಂಪೇಗೌಡ– ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು

14.ಕನ್ನಡ ಕೈಪಿಡಿ :ಕೆ.ವಿ ಪುಟ್ಟಪ್ಪ– ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ ಮೈಸೂರು

15.ಕರ್ನಾಟಕದ ಬುಡಕಟ್ಟುಗಳು ಸಂಪುಟ 1,2: [ಸಂ] ಎಚ್, ಜೆ ಲಕ್ಕಪ್ಪಗೌಡ
ಕರ್ನಾಟಕ ಜಾನಪದ ಮತ್ತು ಸಾಹಿತ್ಯ ಅಕಾಡೆಮಿ ಬೆಂಗಳೂರು

16.ಕರ್ನಾಟಕ ಜನಪದ ಕಲೆಗಳ ಕೋಶ: ಹಿ, ಚಿ ಬೋರಲಿಂಗಯ್ಯ ಕನ್ನಡ ವಿಶ್ವವಿದ್ಯಾಲಯ ಹಂಪಿ

17.ಸುವರ್ಣ ಸಂಚಯ: [ಸಂ] ದೇ, ಜವರೇಗೌಡ: ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು

18.ಸಾಮಾನ್ಯ ಭಾಷಾ ವಿಜ್ಞಾನ : ಕೆ, ಕೆಂಪೇಗೌಡ– ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ ಮೈಸೂರು

19.ಸರಳ ಶಬ್ದಮಣಿದರ್ಪಣ: ಎನ್, ಎಸ್ ಅಂಗಡಿ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ

20.ಸಂಕ್ಷಿಪ್ತ ಕನ್ನಡ ಭಾಷಾ ಚರಿತ್ರೆ :ಎಂ, ಎಚ್ ಕೃಷ್ಣಯ್ಯ –ಅಂಕಿತ ಪ್ರಕಾಶನ ಬೆಂಗಳೂರು

21.ಶತಮಾನದ ಸಂಶೋಧನೆ: [ಸಂ] ಎನ್, ಎಸ್ ತಾರಾನಾಥ – ಕನ್ನಡ ಭವನ ಬೆಂಗಳೂರು

22.ಸಾಂಸ್ಕೃತಿಕ ಅಧ್ಯಯನ :ರಹಮತ್ ತರೀಕೆರೆ– ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು

23.ತೌಲನಿಕ ಕಾವ್ಯ ಮೀಮಾಂಸೆ :ಎಚ್, ತಿಪ್ಪೇರುದ್ರಸ್ವಾಮಿ–ಡಿ, ವಿ, ಕೆ ಮೂರ್ತಿ ಕೃಷ್ಣಮೂರ್ತಿಪುರಂ ಮೈಸೂರು

24.ತೌಲನಿಕ ದ್ರಾವಿಡ ವ್ಯಾಕರಣ: ಮೂಲ ರಾಬರ್ಟ್ ಕಾಲ್ಡವೆಲ್ ಅನು:ಮಾಧವ ಪೆರಾಜೆ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ

25.ಉಪಭಾಷಾವಿಜ್ಞಾನ : ಶಾಲಿನಿ ರಘುನಾಥ– ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ ಮೈಸೂರು

26.ಉಪಭಾಷಾ ವಿಜ್ಞಾನ : ಡಾ, ರಾಜೇಂದ್ರ ಎಂ ನಾಯಕ –ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ

27.ಉಪಸಂಸ್ಕೃತಿ: ರಹಮತ್ ತರೀಕೆರೆ – ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್ ಬೆಂಗಳೂರು.

28.ಅಭಿವ್ಯಕ್ತಿ;ಸಾಹಿತ್ಯ ಮಾಸಿಕ;(ಸಂ) ರಾಗೌ– ಕರ್ನಾಟಕ ಸಂಘ–ಮಂಡ್ಯ

